# 1 ನಮ್ಮ ಜಿಲ್ಲೆ

ಮಕ್ಕಳೆ, ನಿಮ್ಮ ಊರಿನ ಕೆಲಸದ ಮೇಲ್ವಿಚಾರಣೆಗೆ ಬರುವ ತಹಸಿಲದಾರನನ್ನು ನೀವು ನೋಡಿರುವಿರಷ್ಟೆ. ಈ ತಹಸಿಲದಾರನು ನಿಮ್ಮ ಊರಂಥ ಹಲವು ಊರುಗಳ ಮೇಲ್ವಿಚಾರಣೆ ಮಾಡುತ್ತಾನೆ. **ತಹಸಿಲದಾರನ ಅಧಿಕಾರಕ್ಕೆ ಒಳಪಟ್ಟ ಪ್ರದೇಶಕ್ಕೆ ತಾಲೂಕು ಅನ್ನುತ್ತಾರೆ** ತಾಲೂಕಿನ ಅಧಿಕಾರಿಯಾದ ತಹಸಿಲದಾರನು ಯಾವ ಊರಲ್ಲಿ ಇರುವನೋ ಆ ಊರ ಹೆಸರು ಆ ತಾಲೂಕಿಗೆ ಬರುತ್ತದೆ. ನಿಮ್ಮ ತಾಲೂಕು ಯಾವದು ?

ತಾಲೂಕಿಗಿಂತ ಭಾಗವು ಚಿಕ್ಕದಿದ್ದರೆ ಅದಕ್ಕೆ ಪೇಠಾ ಇಲ್ಲವೆ ಮಹಾಲ ಅನ್ನುವರು. ಅದರ ಮೇಲಿನ ಅಧಿಕಾರಿಗೆ ಡೆಪ್ಯುಟಿ ತಹಸಿಲ ದಾರ ಅನ್ನುವರು.

ತಾಲೂಕುಗಳ ಅಧಿಕಾರಿಗಳಾದ ತಹಸಿಲದಾರರ ಕೆಲಸದ ಮೇಲ್ವಿಚಾರಣೆ ಮಾಡುವ ಒಬ್ಬ ಅಧಿಕಾರಿ ಇರುವನು. ಅವನಿಗೆ 'ಡೆಪ್ಯುಟಿ ಕಮಿಶನರ, ಎಂದು ಅನ್ನುವರು. ಡೆಪ್ಯುಟಿ ಕಮಿಶನರನ ಅಧಿಕಾರದಲ್ಲಿ ತಾಲೂಕು ಮತ್ತು ಪೇಠಾಗಳು ಇರುವವು. **ಡೆಪ್ಯುಟಿ ಕಮಿಶನರನ ಅಧಿಕಾರಕ್ಕೆ ಒಳಪಟ್ಟ ಪ್ರದೇಶಕ್ಕೆ ಜಿಲ್ಲೆ** ಎಂಬ್ಬ ಹೆಸರು. ಈ ಅಧಿಕಾರಿಯು ಯಾವ ಪಟ್ಟಣದಲ್ಲಿ ಇರುವನೋ ಆ ಪಟ್ಟ ಣದ ಹೆಸರನ್ನೇ ಸಾಮಾನ್ಯವಾಗಿ ಆ ಜಿಲ್ಲೆಗೆ ಕೊಡುತ್ತಾರೆ. ಪೇಠಾ, ತಾಲೂಕು, ಜಿಲ್ಲೆ ಇವು ಸರಕಾರದ ಅನುಕೂಲಕ್ಕಾಗಿ ಮಾಡಿಕೊಂಡ ಭಾಗಗಳು. ನಮ್ಮ ಜಿಲ್ಲೆಯ ಅಧಿಕಾರಿಯಾದ ಡೆಪ್ಯುಟಿ ಕಮಿಶನರನು ಬೆಳಗಾವಿಯಲ್ಲಿ ಇರುವನು. ಅದಕ್ಕಾಗಿ ನಮ್ಮ ಜಿಲ್ಲೆಗೆ **ಬೆಳಗಾವಿ ಜಿಲ್ಲೆ** ಎಂದು ಕರೆಯುವರು.

ನೀವು 'ಭಾರತ ಮಾತೆಗೆ ಜಯವಾಗಲಿ' ಎಂದು ಹೇಳುವದಿಲ್ಲವೇ? ಭಾರತವು ನಮ್ಮ ದೇಶ. ಭಾರತ ದೇಶದಲ್ಲಿ ಹದಿನಾಲ್ಕು ರಾಜ್ಯಗಳು ಇರುತ್ತವೆ. ಇವು ಭಾರತದಲ್ಲಿಯ ಒಂದೊಂದು ಭಾಗಗಳು. ನಾವು "ಉದಯವಾಯಿತು ನಮ್ಮ ಚೆಲುವ ಕನ್ನಡ ನಾಡು" ಎಂದು ಹಾಡುತ್ತೇವೆ. ಇದು ನಮ್ಮ ನಾಡಗೀತೆ ನಾವಿರುವ ಭಾಗಕ್ಕೆ ಕನ್ನಡ ನಾಡು ಎಂದು ಹೆಸರು. ಕನ್ನಡವು ಈ ನಾಡಿನ ಭಾಷೆ. ಕನ್ನಡನಾಡು ಭಾರತದಲ್ಲಿಯ ಹದಿನಾಲ್ಕು ರಾಜ್ಯಗಳಲ್ಲಿ ಒಂದು. ಇದಕ್ಕೆ **ಮೈಸೂರ ರಾಜ್ಯ** ಎಂದು ಹೇಳುತ್ತಾರೆ.

ಇದು ನೋಡಿರಿ. ಇದು ಬೆಳಗಾವಿ ಜಿಲ್ಲೆಯ ನಕಾಶ. ಇದರಲ್ಲಿ ಜಿಲ್ಲೆಯ ಸೀಮೆ (ಮೇರೆ) ಯನ್ನು ಕಪ್ಪು ಗೆರೆಯಿಂದ ತೋರಿಸಿದೆ. ಅದರೊಳಗಿನ ತಾಲೂಕು ಮತ್ತು ಪೇಠಾಗಳ ಮೇರೆಗಳನ್ನು ಟಿಮ್ಮು ಟಿಮ್ಮು ಗೆರೆಗಳಿಂದ ತೋರಿಸಿದೆ.

ಈ ನಕಾಶವನ್ನು ನೋಡಿ ಬೆಳಗಾವಿಜಿಲ್ಲೆಯಲ್ಲಿ ಯಾವ ಯಾವ ತಾಲೂಕುಗಳು ಮತ್ತು ಮಹಾಲ ಇರುತ್ತವೆಂಬದನ್ನು ಹೇಳಿರಿ.

## ಬೆಳಗಾವಿ ಜಿಲ್ಲೆಯಲ್ಲಿಯ ತಾಲೂಕುಗಳು:

**1 ಅಥಣಿ 2 ಚಿಕ್ಕೋಡಿ 3 ಹುಕ್ಕೇರಿ 4 ಬೆಳಗಾವಿ 5 ಖಾನಾಪುರ 6 ಗೋಕಾಕ 7 ಬೈಲಹೊಂಗಲ (ಸಂಪಗಾಂವ) 8 ಸವದತ್ತಿ (ಪರಸಗಡ) 9 ರಾಮದುರ್ಗ.**

**ಮಹಾಲ:— ರಾಯಬಾಗ.**

· ಈಗ ಬೆಳಗಾವಿ ಜಿಲ್ಲೆಯ ಸುತ್ತಲು ತಿರುಗಿ ಈ ಜಿಲ್ಲೆಗೆ ಹೊಂದಿ ಯಾವ ಯಾವ ಪ್ರದೇಶಗಳು ಇರುತ್ತವೆಂಬದನ್ನು ನೋಡಿರಿ.

ಉತ್ತರ ದಿಕ್ಕಿನ ಪೂರ್ವ ಬದಿಯಿಂದ ಪ್ರಾರಂಭಿಸಿ ಪಶ್ಚಿಮಕ್ಕೆ ಸಾಗಿ ನೋಡುತ್ತ ಬನ್ನಿರಿ. ಬೆಳಗಾವಿ ಜಿಲ್ಲೆಯ ಮೇರೆಗಳು ಕೆಳಗಿನಂತೆ ಇರುವವು.

**ಉತ್ತರದಲ್ಲಿ — ದಕ್ಷಿಣ ಸಾತಾರೆ ಜಿಲ್ಲೆ.**

**ಪಶ್ಚಿಮದಲ್ಲಿ — ಕೊಲ್ಹಾಪುರ ಜಿಲ್ಲೆ, ರತ್ನಾಗಿರಿ ಜಿಲ್ಲೆ ಮತ್ತು ಗೋವೆ ಪ್ರಾಂತ.**

**ದಕ್ಷಿಣದಲ್ಲಿ — ಉತ್ತರ ಕನ್ನಡ ಜಿಲ್ಲೆ, ಧಾರವಾಡ ಜಿಲ್ಲೆ.**

**ಪೂರ್ವದಲ್ಲಿ — ವಿಜಾಪುರ ಜಿಲ್ಲೆ.**

### ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳನ್ನು ತುಂಬಿ ಪೂರ್ಣ ಮಾಡಿರಿ.

1 ಬೆಳಗಾವಿ ಜಿಲ್ಲೆಯಲ್ಲಿ ............... ತಾಲೂಕುಗಳು ಇರುತ್ತವೆ.
2 ಬೆಳಗಾವಿ ಜಿಲ್ಲೆಯ ಪಶ್ಚಿಮಕ್ಕೆ ............... ಪ್ರಾಂತವು ಇರುವದು.
3 ಅಥಣಿ ತಾಲೂಕು ಬೆಳಗಾವಿ ಜಿಲ್ಲೆಯಲ್ಲಿ .................... ಬದಿಗೆ ಇರುವದು.
4 ಬೆಳಗಾವಿ ಜಿಲ್ಲೆಗೆ ಹೊಂದಿ ದಕ್ಷಿಣಕ್ಕೆ ............... ಜಿಲ್ಲೆಗಳು ಇರುವವು.

---

## 2 ಪ್ರಾಕೃತಿಕ ಲಕ್ಷಣ

### ಗುಡ್ಡಗಳು-ನದಿಗಳು

ಭೂಮಿಯು ಎಲ್ಲ ಕಡೆಗೂ ಸಮನೆಲದ್ದಾಗಿ ಇರುವದಿಲ್ಲ. ಏರಿಳಿತಗಳಿಂದ ಕೂಡಿದೆಯೆಂಬದು ನಿಮಗೆ ಗೊತ್ತಿದೆ. ಬೆಳಗಾವಿ ಜಿಲ್ಲೆಯಲ್ಲಿ ಹರಿಯುವ ನದಿಗಳನ್ನು ನೋಡಿರಿ. ಅವು ಪಶ್ಚಿಮದಿಂದ ಪೂರ್ವಕ್ಕೆ ಹರಿದಿರುತ್ತವೆ. ಇದರಿಂದ ಈ ಜಿಲ್ಲೆಯ ಭೂಮಿಯು


ಬೆಳಗಾವಿ ಜಿಲ್ಲೆ
ನದಿಗಳೂ ಗುಡ್ಡಗಳೂ
ಸೂಚನೆ:-
ನದಿಗಳು
ಹಳ್ಳಗಳು
ಗುಡ್ಡಗಳು
P.R.P.

ಸಾಮಾನ್ಯವಾಗಿ ಪಶ್ಚಿಮದಿಕ್ಕಿನಲ್ಲಿ ಏರಾಗಿದ್ದು ಪೂರ್ವಕ್ಕೆ ಇಳುಕಲಾಗುತ್ತ ಹೋಗಿರುವದೆಂಬದು ಕಂಡು ಬರುತ್ತದೆ. †

ಈ ಜಿಲ್ಲೆಯಲ್ಲಿ ಕೃಷ್ಣಾ, ಘಟಪ್ರಭಾ, ಮಲಪ್ರಭಾ ಎಂಬ ಮೂರು ಮುಖ್ಯ ನದಿಗಳು ಹರಿಯುತ್ತವೆ. ಈ ನದಿಗಳಿಗೆ ಉತ್ತರ ದಿಕ್ಕಿನಿಂದಲೂ, ದಕ್ಷಿಣ ದಿಕ್ಕಿನಿಂದಲೂ ಚಿಕ್ಕ ನದಿಗಳು, ಹಳ್ಳಗಳು ಬಂದು ಕೂಡಿವೆ. ಇದರಿಂದ ಎರಡು ನದಿಗಳ ನಡುವಿನ ಭೂಮಿಯು ನಡುವೆ ಎತ್ತರವಾಗಿದ್ದು ದಕ್ಷಿಣೋತ್ತರ ಇಳುಕಲಾಗಿದೆ ಎಂಬದು ಸ್ಪಷ್ಟವಾಗುತ್ತದೆ. ಈ ಉಬ್ಬಿನಗುಂಟ ಗುಡ್ಡದ ಸಾಲುಗಳು ಹಬ್ಬಿವೆ. ಹೀಗೆ ಎರಡು ಗುಡ್ಡದ ಸಾಲಗಳು ಈ ಜಿಲ್ಲೆಯಲ್ಲಿ ಹಬ್ಬಿವೆ. ಕೃಷ್ಣಾ-ಘಟಪ್ರಭಾ ನದಿಗಳ ನಡುವೆ ಹಬ್ಬಿದ ಸಾಲು ಒಂದು. ಘಟಪ್ರಭಾ-ಮಲಪ್ರಭಾ ನದಿಗಳ ನಡುವೆ ಹಬ್ಬಿದ ಸಾಲು ಇನ್ನೊಂದು. ಇವುಗಳಲ್ಲಿ ಘಟಪ್ರಭಾ, ಮಲಪ್ರಭಾ ನದಿಗಳ ನಡುವೆ ಹಬ್ಬಿದ ಸಾಲಿನಲ್ಲಿಯ ಗುಡ್ಡಗಳು ಕೃಷ್ಣಾ, ಘಟಪ್ರಭಾ ನದಿಗಳ ನಡುವೆ ಹಬ್ಬಿದ ಸಾಲಿನಲ್ಲಿಯ ಗುಡ್ಡಗಳಿಗಿಂತ ಎತ್ತರವಾಗಿವೆ. ಬೆಳಗಾವಿ ಜಿಲ್ಲೆಯ ಪಶ್ಚಿಮದಲ್ಲಿ **ಸಹ್ಯ** ಪರ್ವತವು ದಕ್ಷಿಣೋತ್ತರವಾಗಿ ಹಬ್ಬಿದೆ. ಬೆಳಗಾವಿ ಜಿಲ್ಲೆಯಲ್ಲಿ ಹಬ್ಬಿದ ಗುಡ್ಡಗಳ ಸಾಲುಗಳು ಇದರ ಶಾಖೆಗಳು.

**ಕೃಷ್ಣಾ**— ಈ ನದಿಯು ನಮ್ಮ ಜಿಲ್ಲೆಯಲ್ಲಿ ಹರಿಯುವ ನದಿಗಳಲ್ಲಿ ಎಲ್ಲಕ್ಕೂ ದೊಡ್ಡದು. ಆದ್ದರಿಂದ ಸಾಮಾನ್ಯ ಜನರು ಇದನ್ನು ಹಿರಿಹೊಳೆ ಎಂದು ಕರೆಯುತ್ತಾರೆ. ಇದು ಸಾತಾರಾ ಜಿಲ್ಲೆಯ ಮಹಾಬಳೇಶ್ವರ ಎಂಬಲ್ಲಿ ಹುಟ್ಟಿದೆ. ನಮ್ಮ ಜಿಲ್ಲೆಯಲ್ಲಿ ಸೇರುವ ಮೊದಲು ಕೊಲ್ಲಾಪುರ, ದಕ್ಷಿಣ ಸಾತಾರೆ ಜಿಲ್ಲೆಗಳಲ್ಲಿ ಹರಿದು

---

† ಶಿಕ್ಷಕರು ನಕಾಶದಲ್ಲಿಯ ಗುಡ್ಡ, ನದಿ ಇವುಗಳ ಗುರುತುಗಳನ್ನು ವಿದ್ಯಾರ್ಥಿಗಳಿಗೆ ಹೇಳಿ ಕೊಡಬೇಕು.

ಬರುತ್ತದೆ. ನಮ್ಮ ಜಿಲ್ಲೆಯ ಉತ್ತರ ಭಾಗದಲ್ಲಿರುವ ಚಿಕ್ಕೋಡಿ ತಾಲೂಕು, ರಾಯಬಾಗ ಮಹಾಲ, ಅಥಣಿ ತಾಲೂಕುಗಳಲ್ಲಿ ಹರಿದಿದೆ. ಕೃಷ್ಣಾ ನದಿಯ ದಂಡೆಯ ಪ್ರದೇಶವು ಕಪ್ಪು ಮಣ್ಣಿನದಿದ್ದು ಅದರಲ್ಲಿ ಒಳ್ಳೇ ಬೆಳೆ ಬರುತ್ತದೆ. ಈ ನದಿಗೆ ಕುಡಚಿಯ ಹತ್ತರ ರೇಲ್ವೆಯ ದೊಡ್ಡ ಪೂಲು ಇರುತ್ತದೆ.



ಘಟಪ್ರಭಾ ತಡಸಲು

**ಘಟಪ್ರಭಾ**— ಇದು ಬೆಳಗಾವಿ ಜಿಲ್ಲೆಯ ಪಶ್ಚಿಮದಲ್ಲಿರುವ ಕೊಲ್ಹಾಪುರ ಜಿಲ್ಲೆಯಲ್ಲಿ ಹುಟ್ಟಿ ಈ ಜಿಲ್ಲೆಯ ಮಧ್ಯದಲ್ಲಿ ಹುಕ್ಕೇರಿ ಗೋಕಾಕ ತಾಲೂಕುಗಳಲ್ಲಿ ಹರಿದಿದೆ. ಮುಂದೆ ವಿಜಾಪುರ ಜಿಲ್ಲೆಯನ್ನು ಸೇರಿ ಕೃಷ್ಣಾ ನದಿಗೆ ಕೂಡುತ್ತದೆ. ಈ ನದಿಗೆ ಘಟಪ್ರಭಾ ಎಂಬ ಊರ ಹತ್ತರ ಅಣೆಕಟ್ಟು ಕಟ್ಟಿ ಕಾಲುವೆಗಳನ್ನು ತೆರೆದು ಭೂಮಿಗೆ ನೀರುಣಿಸುವಂತೆ ಮಾಡಿದ್ದಾರೆ. ಈ ಅಣೆಕಟ್ಟಿನಿಂದ ಮೂರು ಮೈಲಿನ ಮೇಲೆ ಗೋಕಾಕ ರೋಡಿನಿಂದ ಗೋಕಾಕಕ್ಕೆ ಹೋಗುವ ದಾರಿಯಲ್ಲಿ ನದಿಯ ನೀರು 170 ಫೂಟು ಎತ್ತರದ ಮೇಲಿಂದ ಕೆಳಗೆ ಬೀಳುವದು.

ಇದಕ್ಕೆ ತಡಸಲು ಎಂದು ಅನ್ನುತ್ತಾರೆ. ಈ ತಡಸಲಿನ ನೀರಿನ ಶಕ್ತಿಯಿಂದ ನದಿಯ ದಂಡೆಯ ಮೇಲೆ ಅರಳೆ ಮತ್ತು ನೂಲಿನ ಗಿರಣಿಯನ್ನು ನಡಿಸುತ್ತಾರೆ. ಮಳೆಗಾಲದಲ್ಲಿ ಈ ತಡಸಲಿನ ನೋಟವು ಭವ್ಯವಾಗಿರುತ್ತದೆ. ಆ ಕಾಲದಲ್ಲಿ ಇದನ್ನು ನೋಡಲಿಕ್ಕೆ ಬಹಳ ಜನರು ಹೋಗುತ್ತಾರೆ.

**ಮಲಪ್ರಭಾ**— ಈ ನದಿಯು ಇದೇ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಖಾನಾಪುರ ತಾಲೂಕಿನಲ್ಲಿ ಹುಟ್ಟಿ ಖಾನಾಪುರ, ಬೈಲಹೊಂಗಲ, ಸವದತ್ತಿ, ರಾಮದುರ್ಗ ತಾಲೂಕುಗಳಲ್ಲಿ ಹರಿದು ವಿಜಾಪುರ ಜಿಲ್ಲೆಯನ್ನು ಸೇರಿ ಕೃಷ್ಣಾ ನದಿಗೆ ಕೂಡುತ್ತದೆ. ರಾಮದುರ್ಗದ ಹತ್ತರ ಈ ನದಿಗೆ ಒಡ್ಡು ಹಾಕಿ ಕಾಲುವೆ ತೆಗೆದು ಭೂಮಿಗೆ ನೀರುಣ್ಣುವಂತೆ ಮಾಡಿದ್ದಾರೆ. ಇದಕ್ಕೆ ಕೊಳಚಿಯ ಒಡ್ಡು ಎಂದು ಹೆಸರು ಕೊಡಲಾಗಿದೆ.

## ಅಭ್ಯಾಸ

1 ಬೆಳಗಾವಿ ಜಿಲ್ಲೆಯ ಭೂಮಿಯು ಪಶ್ಚಿಮದಿಂದ ಪೂರ್ವಕ್ಕೆ ಇಳುಕಲಾಗಿದೆ ಎಂಬದು ಹೇಗೆ ತಿಳಿದು ಬರುವದು?

2 ಕೃಷ್ಣಾ ನದಿಗೆ ಹಿರಿಹೊಳೆ ಎಂದು ಯಾಕೆ ಕರೆಯುತ್ತಾರೆ?

3 ಬೆಳಗಾವಿ ಜಿಲ್ಲೆಯಲ್ಲಿ ಯಾವ ನದಿಯಿಂದ ತಡಸಲು ಆಗಿದೆ?

4 ಮಲಪ್ರಭಾ ನದಿಯು ಯಾವ ಯಾವ ತಾಲೂಕುಗಳಲ್ಲಿ ಹರಿದಿದೆ?

---


ಬೆಳಗಾವಿ ಜಿಲ್ಲೆ
ಸ್ವಾಭಾವಿಕ ವಿಭಾಗಗಳು.
ಮಲೆನಾಡು
ಗಡಿನಾಡು
ಬೆಳವಲ

# 3 ಸ್ವಾಭಾವಿಕ ವಿಭಾಗಗಳು

ತಾಲೂಕು, ಜಿಲ್ಲೆ ಇವು ಆಡಳಿತೆಯ ಸಲುವಾಗಿ ಮಾಡಿಕೊಂಡ ಭಾಗಗಳು. ಯಾವದೊಂದು ಭೂಭಾಗದಲ್ಲಿ ಆ ಆ ಪ್ರದೇಶದ ನೆಲ, ಹವೆ, ಮಳೆ, ಬೆಳೆ ಮೊದಲಾದವುಗಳ ಹೊಂದಿಕೆಯಿಂದ ಆಗುವ ವಿಭಾಗಗಳಿಗೆ ಸ್ವಾಭಾವಿಕ ವಿಭಾಗ ಎಂದು ಹೇಳುತ್ತಾರೆ.

ಬೆಳಗಾವಿ ಜಿಲ್ಲೆಯಲ್ಲಿ ಮೂರು ಸ್ವಾಭಾವಿಕ ವಿಭಾಗಗಳು ಆಗುತ್ತವೆ. ಅವುಗಳಿಗೆ ಮಲೆನಾಡು, ಬೆಳವಲನಾಡು, ಗಡಿನಾಡು ಎಂಬು ಹೆಸರು.

## ಮಲೆನಾಡು

ಬೆಳಗಾವಿ, ಖಾನಾಪುರ ತಾಲೂಕುಗಳ ಪಶ್ಚಿಮ ಭಾಗವು ಗುಡ್ಡಗಾಡು ಪ್ರದೇಶವಾಗಿದೆ. ಈ ಗುಡ್ಡಗಾಡು ಪ್ರದೇಶವು ಪಶ್ಚಿಮ ಸಮುದ್ರಕ್ಕೆ ಸಮೀಪವಾಗಿದೆ. ಆ ಸಮುದ್ರದ ಮೇಲಿನ ಉಗಿಗೂಡಿದ ಗಾಳಿಗಳು ಬೀಸುವದರಿಂದ ಈ ಭಾಗದಲ್ಲಿ ಮುಂಗಾರಿ ಮಳೆಯು ಹೆಚ್ಚಾಗಿ ಆಗುತ್ತದೆ. ಪಶ್ಚಿಮಕ್ಕೆ ಹೋದಂತೆ ಮಳೆ ಹೆಚ್ಚು. ಆದ್ದರಿಂದ ಗುಡ್ಡಗಳ ಮೇಲೆ ದಟ್ಟವಾಗಿ ಗಿಡಮರಗಳು ಬೆಳೆದಿವೆ. ಈ ಗುಡ್ಡಗಾಡು ಪ್ರದೇಶಕ್ಕೆ ಮಲೆನಾಡು ಎಂದು ಕರೆಯುತ್ತಾರೆ. ಮಲೆನಾಡಿನ ಹವೆಯು ತಂಪಾಗಿರುತ್ತದೆ ಮತ್ತು ರೋಗಕಾರಕ ಇರುತ್ತದೆ.

ಮಲೆನಾಡಿನ ಭೂಮಿಯು ಕೆಂಪು ಮಣ್ಣಿನದು. ಅಷ್ಟೊಂದು ಕಸುವಿನ ಭೂಮಿಯಲ್ಲ. ಆದರೆ ಸಾಕಷ್ಟು ಮಳೆಯಾಗುವದರಿಂದ ಬತ್ತವು ಬೆಳೆಯುತ್ತದೆ. ಬತ್ತವೇ ಇಲ್ಲಿಯ ಮುಖ್ಯ ಬೆಳೆ. ಮಳೆಗಾಲದ ಪ್ರಾರಂಭಕ್ಕೆ ಬತ್ತವನ್ನು ಬಿತ್ತುವರು. ದೀವಳಿಗೆಯ ಹಬ್ಬಕ್ಕೆಂದರೆ ಬತ್ತ ಕೊಯ್ಯುವರು. ಆ ಮೇಲೆ ಅದೇ ಭೂಮಿಯಲ್ಲಿ

ಚೆನ್ನಂಗಿ ಬಟ್ಟಗಡಲೆ ಮೊದಲಾದವನ್ನು ಬೆಳೆಯುವರು. ಅವುಗಳಿಗೆ ಕಡಪಲ (ಕಡೆಯ ಫಲ) ಧಾನ್ಯಗಳೆಂದು ಹೇಳುತ್ತಾರೆ. ನೀರಿನ ಆಸರವು ಇರುವದರಿಂದ ಇಲ್ಲಿ ಕಬ್ಬಿನ ಬೆಳೆಯೂ ಬರುತ್ತಸೆ.

ಮಲೆನಾಡಿನ ಗುಡ್ಡಗಳಲ್ಲಿ ತೇಗು, ಮತ್ತಿ, ಸಿಸುವು, ಹೊನ್ನಿ, ಹಲಸು ಮೊದಲಾದ ಮರಗಳು ಬೆಳೆಯುತ್ತವೆ. ಬಿದಿರೂ ಹೆಚ್ಚಾಗಿ ಬೆಳೆಯುತ್ತದೆ. ಇವೆಲ್ಲ ಮನೆಕಟ್ಟುವದಕ್ಕೆ ಹೆಚ್ಚು ಉಪಯುಕ್ತವಾಗಿವೆ. ಆದ್ದರಿಂದ ಈ ಕಟ್ಟಿಗೆಗಳು, ಬಿದಿರು ಹೊರನಾಡಿಗೆ ಹೋಗುತ್ತವೆ. ಇಲ್ಲಿಯ ಗುಡ್ಡಗಳಲ್ಲಿ ಇಮಾರತಿಯ ಕಟ್ಟಿಗೆಯ ಮರಗಳಲ್ಲದೆ ದಿಂಡಲ ಮೊದಲಾದ ಉರವಲದ ಕಟ್ಟಿಗೆಯ ಮರಗಳೂ ಗಂಧದ ಮರಗಳೂ ಇರುತ್ತವೆ. ಅಲ್ಲದೆ ಕೇರು, ಅಳಲೆ, ಅಂಟಾಳ, ಸೀಗೆ ಮೊದಲಾದ ಉಪಯುಕ್ತ ಗಿಡಗಳು ಇರುತ್ತವೆ.

ಒಕ್ಕಲುತನವೇ ಮಲೆನಾಡಿನ ಜನರ ಮುಖ್ಯ ಉದ್ಯೋಗ. ಗುಡ್ಡಗಳಲ್ಲಿ ಕಟ್ಟಿಗೆ ಕಡಿದು ಮತ್ತು ಅಳಲೆಯ ಕಾಯಿ ಮೊದಲಾದವುಗಳನ್ನು ಕೂಡು ಹಾಕಿ ಬಡಬಗ್ಗರು ಉಪಜೀವಿಸುತ್ತಾರೆ.

ಮಲೆನಾಡಿನ ಗುಡ್ಡಗಳಲ್ಲಿ ಹುಲಿ, ಚಿರ್ಚು, ಕಾಡಹಂದಿ ಮೊದಲಾದ ಪ್ರಾಣಿಗಳು ಇರುತ್ತವೆ. ಇವು ಒಮ್ಮೊಮ್ಮೆ ಊರ ಭಾಗದಲ್ಲಿ ಬಂದು ಜನರಿಗೆ ತೊಂದರೆ ಕೊಡುತ್ತವೆ. ಹುಲಿ, ಚಿರ್ಚುಗಳು ಅವರು ಸಾಕಿದ ಪ್ರಾಣಿಗಳನ್ನು ಮುರಿದು ತಿನ್ನುತ್ತವೆ. ಕಾಡಹಂದಿಗಳು ಬೆಳೆ ಹಾಳು ಮಾಡುತ್ತವೆ. ಆದ್ದರಿಂದ ಬೇಟೆಗಾರರು ಅವನ್ನು ಕೊಲ್ಲುವರು.

ಈ ಮಲೆನಾಡಿನ ಭಾಗದಲ್ಲಿ ಚಿಕ್ಕ ಹಳ್ಳಿಗಳೇ ಹೆಚ್ಚಾಗಿ ಇರುತ್ತವೆ. ಗುಡ್ಡಗಾಡಿನಲ್ಲಿ ಅಲ್ಲಲ್ಲಿ ಬೆಳೆ ಬರುವ ಭಾಗದಲ್ಲಿ ಜನರು ಒಕ್ಕಲುತನ ಮಾಡಿಕೊಂಡು ಇರುತ್ತಾರೆ. ಇಂಥ ಪ್ರದೇಶವು ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಇರುತ್ತದೆ. ಈ ಹೊಲಗಳ ಸಮೀಪದಲ್ಲಿ ಜನರು ಮನೆ ಮಾಡಿಕೊಂಡು ಇರುತ್ತಾರೆ. ಇದರಿಂದ ಈ ಭಾಗದಲ್ಲಿ ಚಿಕ್ಕ ಚಿಕ್ಕ ಹಳ್ಳಿಗಳು ಹೆಚ್ಚಾಗಿ ಇರುತ್ತವೆ. ದೊಡ್ಡ ಊರುಗಳು ಕಡಮೆ.

ಈ ಭಾಗದಲ್ಲಿ ಮಳೆ ಹೆಚ್ಚಾಗಿ ಆಗುತ್ತದೆ. ಆದ್ದರಿಂದ ಮಳೆಯು ನೀರು ಹರಿದು ಹೋಗುವಂತೆ ಮನೆಯ ಚಪ್ಪರಗಳನ್ನು ಇಳಿಜಾರಾಗಿ ಮಾಡಿರುತ್ತಾರೆ. ಚಪ್ಪರಕ್ಕೆ ಹಂಚು ಹೊಚ್ಚುತ್ತಾರೆ. ಈ ಭಾಗದಲ್ಲಿ ಬತ್ತವು ಬೆಳೆಯುವದರಿಂದ ಅಕ್ಕಿಯ ಅನ್ನವೇ ಇವರ ಮುಖ್ಯ ಆಹಾರ. ಚೆನ್ನಂಗಿ, ಬಟ್ಟಿಗಡಲೆ ಮೊದಲಾದ ಬೇಳೆಯ ಕಾಳುಗಳನ್ನು ಆಹಾರದಲ್ಲಿ ಉಪಯೋಗಿಸುತ್ತಾರೆ. ಜನರು ಹೆಚ್ಚಾಗಿ ಬಡವರು. ಇವರ ಮೈಮೇಲೆ ಬಟ್ಟೆಗಳು ಕಡಮೆ. ಗಂಡಸರು ಮೈಯಲ್ಲಿ ಒಂದು ಪೈರಣ ಹಾಕಿಕೊಳ್ಳುವರು. ದೋತರ ಉಡುವದು ಕಡಮೆ; ಚೆಡ್ಡಿ ಲಂಗಗಳನ್ನು ಹಾಕಿಕೊಳ್ಳುತ್ತಾರೆ. ತಲೆಗೆ ರುಮಾಲ ಸುತ್ತುತ್ತಾರೆ. ಹೆಂಗಸರು ದಟ್ಟಿ ಉಟ್ಟು ಕುಪ್ಪಸ ತೊಡುತ್ತಾರೆ.




ಮಲೆನಾಡಿನ ಒಂದು ಕುಟುಂಬ

ಮಳೆಗಾಲದಲ್ಲಿ ಒಂದೇ ಸವನೆ ಸುರಿಯುವ ಮಳೆಯಲ್ಲಿ ಈ ಜನರು ತಮ್ಮ ಮನೆಗೆಲಸಗಳನ್ನೂ ಹೊಲಗೆಲಸಗಳನ್ನೂ ಮಾಡ

ಬೇಕಾಗುತ್ತದೆ. ಆಗ ಮಳೆ ಹತ್ತಬಾರದೆಂದು ಗೊರಬು ಹೊತ್ತು ಕೊಳ್ಳುತ್ತಾರೆ. ಇದು ಒಂದು ಕುಂಚಿಗೆಯಂಥ ಬುಟ್ಟಿ. ಬಿದರಿನ ಕುಂಚಿಗೆಯನ್ನು ಮಾಡಿ ಅವರ ಮೇಲೆ ಎಲೆಗಳನ್ನು ಹೊದಿಸಿ ಇವನ್ನು ಮಾಡಿರುತ್ತಾರೆ.

## ಬೆಳವಲನಾಡು

ಬೆಳಗಾವಿ ಜಿಲ್ಲೆಯ ಅಥಣಿ, ಗೋಕಾಕ, ಸವದತ್ತಿ, ರಾಮ ದುರ್ಗ ಈ ನಾಲ್ಕು ತಾಲೂಕುಗಳು, ರಾಯಬಾಗ ಮಹಾಲ ಮತ್ತು ಬೈಲಹೊಂಗಲ, ಚಿಕ್ಕೋಡಿ, ಹುಕ್ಕೇರಿ ಈ ಮೂರು ತಾಲೂಕುಗಳ ಪೂರ್ವಭಾಗ ಇದಿಷ್ಟು ಪ್ರದೇಶವು ಹೆಚ್ಚಾಗಿ ಸಮನೆಲದ ಬಯಲು ಪ್ರದೇಶವು. ಇಲ್ಲಿ ಎಲ್ಲಿಯೋ ಅಲ್ಲೊಂದು ಇಲ್ಲೊಂದು ಚಿಕ್ಕ ಚಿಕ್ಕ ಗುಡ್ಡಗಳು ಇರುತ್ತವೆ. ಈ ಭಾಗದಲ್ಲಿ ಮಳೆಯು ಕಡಮೆ ಆಗುವದು. ಹವೆಯಲ್ಲಿ ಉಷ್ಣತೆ ಹೆಚ್ಚು. ಆದರೆ ಆರೋಗ್ಯಕಾರಕ ಇರುತ್ತದೆ. ಅಲ್ಲಲ್ಲಿ ಮರಡಿ ಮಸಾರಿಯ ಭೂಮಿಯು ಇದ್ದರೂ ಕರಿಮಣ್ಣಿನ ಎರೆ ಭೂಮಿಯು ಹೆಚ್ಚಿಗೆ ಇರುತ್ತದೆ. ಭೂಮಿಯು ಸಮನೆಲದ್ದಿರು ವದರಿಂದ ಬಯಲು ಸೀಮೆ ಎಂದೂ ಇಲ್ಲಿಯ ಎರೆ ಭೂಮಿಯು ಕಸುವಿನದಿದ್ದು ಬೆಳೆಯು ಒಳ್ಳೇ ಕಸುವಿನಿಂದ ಬರುವದರಿಂದ ಬೆಳವಲ (ಬೆಳೆಯುವ ಹೊಲ) ಎಂದೂ ಈ ಭಾಗಕ್ಕೆ ಹೆಸರು ಬಿದ್ದಿದೆ.

ಮಲೆನಾಡಿನಲ್ಲಿ ಮುಂಗಾರಿಯ ಮಳೆಯು ಹೆಚ್ಚಾಗಿ ಆಗು ವದು. ಆದರೆ ಬೆಳವಲದಲ್ಲಿ ಅಷ್ಟು ಆಗುವದಿಲ್ಲ. ಈ ಭಾಗ ದಲ್ಲಿ ಪೂರ್ವದಿಂದ ಬರುವ ಹಿಂಗಾರಿಯ ಮಳೆಯು ಆಗುವದು. ಆದುದರಿಂದ ಹಿಂಗಾರಿಯ ಬೆಳೆಗಳಾದ ಬಿಳಿಜೋಳ, ಗೋದಿ, ಹತ್ತಿ ಇವು ಹೆಚ್ಚಾಗಿ ಬೆಳೆಯುವವು. ಮರಡಿ ಮತ್ತು ಮಸಾರಿಯ ಭೂಮಿಯಲ್ಲಿ ಸಜ್ಜೆ, ಮುಂಗಾರಿ ಜೋಳ, ನೆಲಗಡಲೆ ( ಸೇಂಗಾ ) ಮೊದಲಾದ ಮುಂಗಾರಿಯ ಬೆಳೆಗಳನ್ನು ತೆಗೆದುಕೊಳ್ಳುವರು.

ಜೋಳವೇ ಈ ಭಾಗದ ಮುಖ್ಯ ಬೆಳೆ. ಎರಡನೆಯದಾಗಿ ಹತ್ತಿ. ತೊಗರಿ, ಕಡಲೆ, ಕುಸುಬೆ ಇವುಗಳನ್ನು ಅಕ್ಕಡಿಯ ಕಾಳುಗಳಾಗಿ ಬೆಳೆಯುವರು. ಮಳೆಯಾದರೆ ಈ ಭಾಗದಲ್ಲಿ ಬೆಳೆ ಚೆನ್ನಾಗಿ ಬರುತ್ತದೆ. ಆದರೆ ಮಲೆನಾಡಿನಂತೆ ಈ ಭಾಗದಲ್ಲಿ ನಿಯಮಿತವಾಗಿ ಮಳೆ ಆಗುವದಿಲ್ಲ. ಆದ್ದರಿಂದ ಬರ ಬೀಳುವ ಹೆದರಿಕೆ ಇರುತ್ತದೆ.

ಮಲೆನಾಡಿನಲ್ಲಿ ಇದ್ದಂತೆ ಈ ಭಾಗದಲ್ಲಿ ದಟ್ಟವಾಗಿ ಗಿಡ-ಮರಗಳು ಬೆಳೆದ ಅಡವಿಗಳು ಇರುವದಿಲ್ಲ. ಆದರೆ ಬೇವು, ಆಲ, ಅರಳೆ, ಹುಣಸೆ ಮೊದಲಾದ ದೊಡ್ಡ ದೊಡ್ಡ ಮರಗಳು ಅಲ್ಲಲ್ಲಿ ಇರುತ್ತವೆ. ಅಲ್ಲಲ್ಲಿ ಜಾಲಿಯ ಗಿಡಗಳೂ ಇರುತ್ತವೆ. ಬೇವು, ಜಾಲಿ ಇವುಗಳ ಕಟ್ಟಿಗೆಗಳನ್ನು ಮನೆ ಕಟ್ಟುವದಕ್ಕೂ, ಒಕ್ಕಲುತನದ ಸಾಮಾನುಗಳನ್ನು ಮಾಡುವದಕ್ಕೂ ಉಪಯೋಗಿಸುತ್ತಾರೆ.

ಈ ಭಾಗದಲ್ಲಿ ಮಳೆ ಕಡಮೆಯಾಗುವದರಿಂದ ನೀರಿನ ಅರಬು ಇರುತ್ತದೆ. ನೀರಿನ ಆಶ್ರಯವಿದ್ದಲ್ಲಿ ಜನರು ಊರುಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಆದ್ದರಿಂದ ಹೊಳೆ ಹಳ್ಳಗಳ ದಂಡೆಗುಂಟ ಹಳ್ಳಿಗಳು ಹೆಚ್ಚಾಗಿ ಇರುತ್ತವೆ. ಮತ್ತು ಸಮೀಪ ಸಮೀಪದಲ್ಲಿ ಇರುತ್ತವೆ. ಉಳಿದ ಕಡೆಗೆ ಬಾವಿ ಕೆರೆಗಳಿಗೆ ನೀರು ಇರುವಲ್ಲಿ ಜನರು ವಾಸಿಸ ಬೇಕಾಗುತ್ತದೆ. ಆದ್ದರಿಂದ ಹಳ್ಳಿಗಳು ದೂರ ದೂರ ಇರುತ್ತವೆ. ಮಲೆನಾಡಿನ ಹಳ್ಳಿಗಳಿಗಿಂತ ಇವು ದೊಡ್ಡವು ಇರುತ್ತವೆ. ಸಾಮಾನ್ಯವಾಗಿ ಮಲೆನಾಡಿಗಿಂತಲೂ ಈ ಭಾಗದಲ್ಲಿ ಹೆಚ್ಚು ಜನರು ವಾಸಿಸುತ್ತಾರೆ.

ಮಳೆ ಕಡಮೆಯಾಗುವದರಿಂದ ಈ ಭಾಗದಲ್ಲಿ ಮಲೆನಾಡಿನಂಥ ಚಪ್ಪರದ ಮನೆಗಳು ಇರುವದಿಲ್ಲ. ಬಿಸಿಲು ಹೆಚ್ಚು; ಹವೆಯು ಉಷ್ಣವಾದದ್ದು. ಹಂಚುಗಳು ಬಿಸಿಲಲ್ಲಿ ಕಾಯ್ದರೆ ಸೆಕೆಯೆನಿಸುವದು. ಮೇಲು ಮುದ್ದೆಯ ಮನೆಗಳಲ್ಲಿ ಅಷ್ಟು ಸೆಕೆಯೆನಿಸುವದಿಲ್ಲ. ಆದ್ದ

ರಿಂದ ಈ ಭಾಗದಲ್ಲಿ ಮಣ್ಣಿನ ಮೇಲು ಮುದ್ದೆ ಹಾಕಿದ ಮನೆಗಳು ಇರುವವು.

ಈ ಭಾಗದ ಹವೆಯು ಆರೋಗ್ಯಕರ ಇರುವದರಿಂದ ಜನರು ಧಷ್ಟಪುಷ್ಟರಾಗಿರುತ್ತಾರೆ. ಜೋಳವೇ ಇಲ್ಲಿಯ ಜನರ ಮುಖ್ಯ ಆಹಾರ. ಜನವಸತಿಯು ಮಾನದಿಂದ ಸಾಗು ಭೂಮಿಯು ಹೆಚ್ಚಾಗಿ ಇರುವದು. ಆದುದರಿಂದ ಮಲೆನಾಡಿನವರಿಗಿಂತಲೂ ಒಳ್ಳೆಯ ಸ್ಥಿತಿಯಲ್ಲಿ ಇರುವರು. ಇಲ್ಲಿಯ ಗಂಡಸರು ದೋತರ ಉಡುವರು. ಮೈಯಲ್ಲಿ ಅಂಗಿ ಹಾಕಿಕೊಳ್ಳುವರು. ತಲೆಗೆ ರುಮಾಲು ಸುತ್ತುವರು. ಹೆಣ್ಮಕ್ಕಳು ಸೀರೆ ಉಡುವರು. ಕುಪ್ಪಸ ತೊಡುವರು. ಒಕ್ಕಲುತನವೇ ಇವರ ಮುಖ್ಯ ಉದ್ಯೋಗ. ಎರಡನೆಯದಾಗಿ ನೂಲುವದು ನೇಯುವದು.



ಕೃಷ್ಣಾತೀರದ ಹೋರಿ ಮತ್ತು ಆಕಳು

ಈ ಭಾಗದ ದನಗಳು ಮಲೆನಾಡಿನ ದನಗಳಿಗಿಂತ ಸಶಕ್ತವಾಗಿರುವವವು. ಕೃಷ್ಣಾ, ಘಟಪ್ರಭಾ ನದಿಗಳ ದಂಡೆಗಳಲ್ಲಿ ಬೆಳೆಗಳು ತಪ್ಪದೆ ಬರುವದರಿಂದಲೂ ಬೇಸಗೆಯಲ್ಲಿ ಸಹ ಮೇವು ಇರುವದರಿಂದಲೂ ದನಗಳು ಸುಖವಾಗಿ ಬೆಳೆಯುವವು. ಅಲ್ಲಿಯ ಜನರು ಎಮ್ಮೆ, ಆಕಳುಗಳನ್ನು ಹೆಚ್ಚಾಗಿ ಸಾಕುವರು. ಆದುದರಿಂದ ಅಲ್ಲಿ ಹೈನವು ಹೆಚ್ಚು. ಕೃಷ್ಣಾತೀರದ ತುಪ್ಪವು ಶ್ರೇಷ್ಠ ತರಗತಿಯದು.

## ಗಡಿನಾಡು

ಮಲೆನಾಡು ಮತ್ತು ಬೆಳವಲ ಇವುಗಳ ನಡುವೆ ಇರುವುದೇ ಗಡಿನಾಡು. ಬೆಳಗಾವಿ, ಖಾನಾಪುರ ತಾಲೂಕುಗಳ ಪೂರ್ವಭಾಗ, ಬೈಲಹೊಂಗಲ, ಚಿಕ್ಕೋಡಿ, ಹುಕ್ಕೇರಿ ತಾಲೂಕುಗಳ ಪಶ್ಚಿಮಭಾಗ ಇವು ಗಡಿನಾಡಿನಲ್ಲಿ ಬರುತ್ತವೆ.

ಈ ಗಡಿನಾಡಿನಲ್ಲಿ ಗುಡ್ಡಗಳು ಕಡಮೆ. ಬೈಲು ಹೆಚ್ಚು. ಭೂಮಿಯು ಬಹುತರವಾಗಿ ಕೆಂಪು ಕೂಡಿದ ಕರಿ ಮಣ್ಣಿನದು. ಹವೆಯು ಮಲೆನಾಡಿನಷ್ಟು ತಂಪಲ್ಲ, ಬೆಳವಲದಷ್ಟು ಉಷ್ಣವಾದದ್ದಲ್ಲ. ಮಧ್ಯಮವಾದದ್ದು. ಮಳೆಯೂ ಮಧ್ಯಮವಾಗಿ ಆಗುತ್ತದೆ. ಪ್ರತಿವರುಷ ತಪ್ಪದೆ ಮಳೆಯಾಗುತ್ತದೆ. ಮಲೆನಾಡಿನ ಮುಂಗಾರಿಯ ಮಳೆಯೂ ಆಗುತ್ತದೆ; ಬೆಳವಲದಲ್ಲಿ ಆಗುವ ಹಿಂಗಾರಿಯ ಮಳೆಯೂ ಆಗುತ್ತದೆ. ಆದ್ದರಿಂದ ಬೆಳೆಯು ಬಂದೇ ಬರುತ್ತದೆ. ಮಲೆನಾಡಿನಷ್ಟು ಮಳೆಯು ಆಗದಿದ್ದರೂ ಈ ಭಾಗದಲ್ಲಿ ಕೆರೆಗಳನ್ನು ಕಟ್ಟಿಸಿ ಮಳೆಯ ನೀರು ಸಂಗ್ರಹಿಸುತ್ತಾರೆ. ಆದ್ದರಿಂದ ಗಡಿನಾಡಿನಲ್ಲಿ ಕೆರೆಗಳು ಹೆಚ್ಚು. ನೀರನ್ನು ಗದ್ದೆಗಳಿಗೆ ಉಣಿಸಿ ಬತ್ತ, ಕಬ್ಬುಗಳನ್ನು ಬೆಳೆಯುತ್ತಾರೆ. ಬೈಲಹೊಂಗಲ ತಾಲೂಕಿನ ಗಡಿನಾಡಿನ ಭಾಗದಲ್ಲಿ ಜೋಳ, ಉದ್ದು ಇವು ಬೆಳೆಯುವವು. ಹುಕ್ಕೇರಿ, ಚಿಕ್ಕೋಡಿ ತಾಲೂಕಿನ ಗಡಿನಾಡಿನ ಭಾಗದಲ್ಲಿ ಬಾವಿಗಳನ್ನು ತೆಗೆದು ತೋಟಪಟ್ಟಿಗಳನ್ನು ಮಾಡಿಕೊಂಡಿರುವರು. ಇಲ್ಲಿ ಕಬ್ಬು, ಮೆಣಸಿನಕಾಯಿ, ತಂಬಾಕು ಇವುಗಳ ಬೆಳೆಯು ಹೆಚ್ಚಾಗಿ ಬರುವದು. ಜೋಳವು ಗಡಿನಾಡಿನ ಸಾಮಾನ್ಯ ಬೆಳೆಯಾಗಿದೆ.

ಈ ಗಡಿನಾಡಿನಲ್ಲಿ ಬರಗಾಲದ ಹೆದರಿಕೆ ಕಡಮೆ. ಹವೆಯು ಮಲೆನಾಡಿನಷ್ಟು ರೋಗಕಾರಕವಲ್ಲ. ಭೂಮಿ ಬೆಳೆಯುಳ್ಳದ್ದು. ಆದ್ದರಿಂದ ಮಲೆನಾಡು ಬೆಳವಲುಗಳಿಗಿಂತ ಜನದಟ್ಟಣೆಯು ಹೆಚ್ಚಾಗಿ

ಇರುತ್ತದೆ. ಮಲೆನಾಡಿಗೆ ಹೊಂದಿರುವ ಗಡಿನಾಡಿನ ಭಾಗದಲ್ಲಿ ಹಂಚಿನ ಮನೆಗಳು ಇರುವವು. ಬೆಳವಲದ ಕಡೆಗೆ ಹೋದಂತೆ ಮೇಲುಮುದ್ದೆಯ ಮಾಳಿಗೆಯ ಮನೆಗಳು ಹೆಚ್ಚಾಗುವವು. ಅಕ್ಕಿ, ಜೋಳ ಇವು ಈ ಗಡಿನಾಡಿನ ಜನರ ಮುಖ್ಯ ಆಹಾರ. ಒಕ್ಕಲುತನವು ಇವರ ಮುಖ್ಯ ಉದ್ಯೋಗ. ನೂಲುವ, ನೇಯುವ ಉದ್ಯೋಗಗಳೂ ತಕ್ಕ ಮಟ್ಟಿಗೆ ನಡೆಯುತ್ತವೆ.

## ಅಭ್ಯಾಸ

1 ಕೆಳಗೆ ಬಿಟ್ಟ ಸ್ಥಳಗಳಲ್ಲಿ ಅದರ ಮುಂದೆ ಕೊಟ್ಟವುಗಳಲ್ಲಿ ಸರಿಯಾದುದನ್ನು ಆರಿಸಿಕೊಂಡು ಬರೆಯಿರಿ.

1) ಮಲೆನಾಡಿನಲ್ಲಿ ಬೆಳವಲಕ್ಕಿಂತ ............ ಹೆಚ್ಚು. ( ಹಳ್ಳಿಗಳು, ಬೆಳೆಯುವ ಭೂಮಿಗಳು

2) ............ ಇದು ಬೆಳವಲದ ಮುಖ್ಯ ಬೆಳೆ. ( ಬತ್ತ, ಜೋಳ, ಹತ್ತಿ )

3) ಬೆಳವಲದಲ್ಲಿ ............ ಮಳೆ ಹೆಚ್ಚಿಗೆ ಆಗುತ್ತದೆ. ( ಹಿಂಗಾರಿ, ಮುಂಗಾರಿ )

2 ಮಲೆನಾಡಿನ ಜನರ ಮನೆ, ಉಡುಪು ಇವುಗಳ ಬಗ್ಗೆ ಕೆಲವು ಮಾತು ಹೇಳಿರಿ.

3 ನದಿಯ ದಂಡೆಯ ಊರುಗಳಲ್ಲಿ ಹೈನವು ಹೆಚ್ಚು ಇರಲು ಕಾರಣವೇನು?

4 ತಂಬಾಕು ಯಾವ ತಾಲೂಕಿನಲ್ಲಿ ಬೆಳೆಯುತ್ತದೆ?

# 4 ಉದ್ಯೋಗ, ಕೈಗಾರಿಕೆಗಳು ಮತ್ತು ಕಾರಖಾನೆಗಳು

ಪ್ರತಿಯೊಬ್ಬನಿಗೂ ಅನ್ನ ಬೇಕು, ಬಟ್ಟೆ ಬೇಕು. ಇರಲಿಕ್ಕೆ ಮನೆ ಬೇಕು. ಪ್ರತಿಯೊಬ್ಬನು ಇವನ್ನು ದೊರಕಿಸಿಕೊಳ್ಳುವದಕ್ಕಾಗಿ ಯಾವದೊಂದು ಬಗೆಯಾಗಿ ದುಡಿಯಬೇಕಾಗುತ್ತದೆ. ಈ ದುಡಿತವೇ ಅವನ ಉದ್ಯೋಗವಾಗುತ್ತದೆ. ಬೆಳಗಾವಿ ಜಿಲ್ಲೆಯಲ್ಲಿಯ ಬಹಳಷ್ಟು ಜನರು ಒಕ್ಕಲುತನದ ಮೇಲೆಯೇ ಜೀವಿಸುತ್ತಾರೆ. ೧೦೦ರಲ್ಲಿ ೭೫ರಷ್ಟು ಜನರ ಉದ್ಯೋಗವು ಒಕ್ಕಲುತನವಾಗಿದೆ. ಈ ಜನರಿಗೆ ಸಹಾಯಕ ವಾಗುವಂಥ ಬಡಿಗತನ, ಕಮ್ಮಾರಿಕೆ, ಸಮಗಾರಿಕೆ, ಸಿಂಪಿಗತನ, ಗೋಡೆ ಕಟ್ಟುವಿಕೆ ಮೊದಲಾದ ಉದ್ಯೋಗಗಳನ್ನು ಮಾಡಿಕೊಂಡು ಜೀವಿಸುವ ಜನರು ಸಾಮಾನ್ಯವಾಗಿ ಎಲ್ಲ ಹಳ್ಳಿಪಟ್ಟಣಗಳಲ್ಲಿಯೂ ಇರುತ್ತಾರೆ.

ಒಕ್ಕಲುತನದಿಂದ ಮನುಷ್ಯನಿಗೆ ಅವಶ್ಯವಿರುವ ಧಾನ್ಯಗಳು ದೊರೆಯುವವಲ್ಲದೆ ಬಟ್ಟೆಗೆ ಬೇಕಾಗುವ ಹತ್ತಿಯೂ ದೊರೆಯುವದು. ಹತ್ತಿಯನ್ನು ಅರೆದು ಅರಳೆ ಮಾಡಿ, ನೂತು, ನೇಯ್ದು ಬಟ್ಟೆಗಳನ್ನು ಮಾಡುತ್ತಾರೆ. ಮುಂಚಿನ ಕಾಲದಲ್ಲಿ ಹತ್ತಿಯನ್ನು ಅರೆಯುವ ಕೆಲಸವನ್ನು ಹಳ್ಳಿಯ ಜನರೇ ಮಾಡುತ್ತಿದರು. ಈಗ ಈ ಕೆಲಸ ಗಿರಣಿಗಳಲ್ಲಿ ಆಗುತ್ತದೆ. ಬೆಳಗಾವಿ ಜಿಲ್ಲೆಯ ಬೆಳವಲ ನಾಡಿನಲ್ಲಿ ಹತ್ತಿಯು ಬೆಳೆಯುವದು. ಈ ಹತ್ತಿ ಬೆಳೆಯುವ ಪ್ರದೇಶದಲ್ಲಿ ಕೆಲವು ದೊಡ್ಡ ಊರುಗಳಲ್ಲಿ ಹತ್ತಿಯನ್ನು ಅರೆದು ಅರಳೆ ಮಾಡುವ ಮತ್ತು ಅದನ್ನು ಗಂಟು ಕಟ್ಟುವ ಗಿರಣಿಗಳು ಇರುತ್ತವೆ.

ಈ ಜಿಲ್ಲೆಯಲ್ಲಿ ಇಂಥ ಗಿರಣಿಗಳು ಇರುವ ಊರುಗಳು— **ಅಥಣಿ, ಕಾಗವಾಡ** ( ಅಥಣಿ ತಾಲೂಕ ), **ಕುಡಚಿ** (ರಾಯಬಾಗ ಮಹಾಲ), **ಗೋಕಾಕ, ಗೋಕಾಕ ಫಾಲ್ಸ** (ಗೋಕಾಕ ತಾಲೂಕ ), **ಬೈಲಹೊಂಗಲ, ಸವದತ್ತಿ.**

ಇವುಗಳಲ್ಲಿ ಗೋಕಾಕಫಾಲ್ಸದಲ್ಲಿ ಇರುವ ಗಿರಣಿಯು ದೊಡ್ಡದು. ಅಲ್ಲಿ ಅರಳೆ ಮಾಡಿ ಗಂಟು ಕಟ್ಟುವ ಕೆಲಸವು ನಡೆಯುವದಲ್ಲದೆ ನೂಲು ತೆಗೆಯುವದೂ ನಡೆಯುವದು. ಉಳಿದ ಕಡೆಗಳಲ್ಲಿ ಹತ್ತಿಯನ್ನು ಅರೆಯುವ ಕೆಲಸವು ಮಾತ್ರ ನಡೆಯುವದು. ಆ ಗಂಟುಗಳನ್ನು ಮುಂಬಯಿಗೆ ಕಳಿಸಿಕೊಡುವರು.

ಅರಳೆಯಿಂದ ರಾಟಿಯ ಮೇಲೆ ನೂಲು ತೆಗೆದು ಬಟ್ಟೆ ನೇಯುವ ಕೆಲಸವು ಮುಂಚಿನ ಕಾಲದಲ್ಲಿ ಹಲವು ಊರುಗಳಲ್ಲಿ ನಡೆಯುತ್ತಿತ್ತು. ಗಿರಣಿಯ ಬಟ್ಟೆಗಳು ಬಂದಂದಿನಿಂದ ಈ ಉದ್ಯೋಗವು ಮುಗ್ಗಿ ಹೋಗಿತ್ತು. ಮಹಾತ್ಮಾ ಗಾಂಧಿಯವರ ಚಳವಳಿಯ ಪರಿಣಾಮವಾಗಿ ಮತ್ತೆ ಈ ಹಳ್ಳಿಯ ಉದ್ಯೋಗಕ್ಕೆ ಕಳೆ ಬಂದಿದೆ. ಈ ಜಿಲ್ಲೆಯ ಗುರ್ಲಹೊಸೂರ (ಸವದತ್ತಿ ತಾಲೂಕ), ಹುದಲಿ (ಬೆಳಗಾವಿ ತಾಲೂಕ) ಇವು ಈಗಲೂ ಕೈನೂಲಿನ ಬಟ್ಟೆಯ ಕೇಂದ್ರಗಳಾಗಿವೆ.

ಗಿರಣಿಯ ನೂಲನ್ನು ಉಪಯೋಗಿಸಿ ಮಗ್ಗಗಳ ಮೇಲೆ ಬಟ್ಟೆ ನೇಯುವ ಕೆಲಸವೂ ಈ ಜಿಲ್ಲೆಯ ಹಲವು ಊರುಗಳಲ್ಲಿ ನಡೆಯುತ್ತದೆ. ಈ ಪ್ರಕಾರ ಬಟ್ಟೆ ನೇಯುವದರಲ್ಲಿ ಬೆಳಗಾವಿಯ ನೆರೆಯಲ್ಲಿರುವ ಶಹಾಪುರವು ಹೆಚ್ಚು ಪ್ರಸಿದ್ಧವಾಗಿದೆ. ಶಹಾಪುರದಲ್ಲಿ ಬೆಲೆ ಬಾಳುವ ಸೀರೆಗಳು ತಯಾರಾಗುತ್ತವೆ.

ಹತ್ತಿಯಿಂದ ಬಟ್ಟೆಗಳನ್ನು ಮಾಡುವಂತೆ ಕುರಿಗಳ ಉಣ್ಣೆಯಿಂದ ಕಂಬಳಿಗಳನ್ನು ಮಾಡುತ್ತಾರೆ. ಈ ಜಿಲ್ಲೆಯ ಬೆಳವಲ ಭಾಗದಲ್ಲಿ ಕುರಿಗಳನ್ನು ಸಾಕುವ ಉದ್ಯೋಗವು ನಡೆಯುತ್ತದೆ. ಆ ಭಾಗದ ಕೆಲವು ಊರುಗಳು ಕಂಬಳಿ ತಯಾರಿಸುವಲ್ಲಿ ಹೆಸರಾಗಿವೆ.

ಜೋಳ, ಗೋದಿ ಮೊದಲಾದ ಆಹಾರ ಧಾನ್ಯಗಳನ್ನು ಬೀಸಿ ಹಿಟ್ಟು ಮಾಡುವ ಕೆಲಸವು ಮುಂಚಿನ ಕಾಲದಲ್ಲಿ ಪ್ರತಿಯೊಂದು ಮನೆ

ಯಲ್ಲಿಯೂ ನಡೆಯುತ್ತಿತ್ತು. ಇದಕ್ಕಾಗಿ ಬೀಸುವ ಕಲ್ಲುಗಳು ಇರುತ್ತಿದ್ದವು. ಗೋಕಾಕ ತಾಲೂಕಿನಲ್ಲಿರುವ ಅರಭಾವಿಯಲ್ಲಿ ಬೀಸುವ ಕಲ್ಲುಗಳು ತಯಾರಾಗುತ್ತವೆ. ಇತ್ತೀಚೆಗೆ ಬೀಸುವ ಗಿರಣಿಗಳು ಬಂದುದರಿಂದ ಈ ಮನೆಗೆಲಸವು ಮುಗ್ಗುತ್ತಲಿದೆ. ಸಣ್ಣ ದೊಡ್ಡ ಊರುಗಳಲ್ಲಿ ಬೀಸುವ ಗಿರಣಿಗಳಾಗಿವೆ. ಬತ್ತ ಒಡೆದು ಅಕ್ಕಿ ಮಾಡುವದೂ ಮೊದಲು ಮನೆ ಉದ್ಯೋಗವಾಗಿತ್ತು. ಇದೂ ಈಗ ಹೆಚ್ಚಾಗಿ ಗಿರಣಿಗಳಲ್ಲಿಯೇ ನಡೆಯುತ್ತದೆ. ಬತ್ತ ಬೆಳೆಯುವ ಮಲೆನಾಡಿನ ದೊಡ್ಡ ದೊಡ್ಡ ಊರುಗಳಲ್ಲಿ ಬತ್ತ ಒಡೆಯುವ ಗಿರಣಿಗಳು ಇರುತ್ತವೆ.

ಬತ್ತ ಒಡೆಯುವ ಗಿರಣಿಗಳಿದ್ದ ಊರುಗಳು— ಬೆಳಗಾವಿ, ಖಾನಾಪುರ, ನಂದಗಡ (ಖಾನಾಪೂರ ತಾಲೂಕ), ಕಿತ್ತೂರ (ಬೈಲಹೊಂಗಲ ತಾಲೂಕು).

ಬೆಳಗಾವಿ ಜಿಲ್ಲೆಯಲ್ಲಿ ಕಬ್ಬು ಬೆಳೆಯುವ ಪ್ರದೇಶವು ಸಾಕಷ್ಟು ಇರುತ್ತದೆ. ಕಬ್ಬಿನಿಂದ ಹೆಚ್ಚಾಗಿ ಬೆಲ್ಲವನ್ನು ಮಾಡುತ್ತಾರೆ. ಆದರೆ ಕಬ್ಬಿನಿಂದ ಸಕ್ಕರೆ ಮಾಡುವ ಕಾರಖಾನೆಯು ಕೃಷ್ಣಾನದಿಯ ದಂಡೆಯ ಮೇಲೆ ಇರುವ ಉಗಾರದಲ್ಲಿ ಇರುತ್ತದೆ. ಕೃಷ್ಣಾನದಿಯ ನೀರಿನ ಮೇಲೆ ಆ ಸಕ್ಕರೆಗೆ ಬೇಕಾಗುವ ಕಬ್ಬು ಬೆಳೆಯುತ್ತದೆ. ಸಂಕೇಶ್ವರದಲ್ಲಿಯೂ ಒಂದು ಸಕ್ಕರೆಯ ಕಾರಖಾನೆಯು ಆಗುವದರಲ್ಲಿದೆ.

ಬಡಬಗ್ಗರ ಮನೆಬಳಕೆಯ ಪಾತ್ರೆಗಳು ಮಣ್ಣಿನವು ಇರುತ್ತವೆ. ಮಲೆನಾಡಿನಲ್ಲಿ ಮನೆಗಳ ಚಪ್ಪರಗಳಿಗೆ ಹಂಚುಗಳನ್ನು ಹೊದಿಸುವರು. ಮಲೆನಾಡಿನಲ್ಲಿ ಮಣ್ಣಿನ ಇಟ್ಟಂಗಿಗಳಿಂದ ಕಟ್ಟಿದ ಮನೆಗಳೇ ಹೆಚ್ಚಾಗಿರುತ್ತವೆ. ಇಂತಹ ಕೆಲಸಗಳಿಗೆ ಯೋಗ್ಯವಾದ ಮಣ್ಣು ಬೇಕಾಗುತ್ತದೆ. ಅಂಥ ಮಣ್ಣು ದೊರೆಯುವ ಮಲೆನಾಡಿನ ಊರುಗಳಲ್ಲಿ ಈ ಉದ್ಯೋಗವು ಹೆಚ್ಚಾಗಿ ನಡೆಯುತ್ತದೆ. ಖಾನಾಪುರವು ಮನೆಗೆ ಹೊದಿಸುವ ಕೆಂಪು ಹಂಚು ಹಾಗು ಮಣ್ಣಿನ ಪಾತ್ರೆಗಳಿಗೆ ಹೆಸರಾಗಿದೆ.

ಇದಲ್ಲದೆ ಹುಕ್ಕೇರಿ ತಾಲೂಕಿನ ಘೋಡಗೇರಿಯಲ್ಲಿ ಕಾಜಿನ ಬಳೆಗಳನ್ನು ಮಾಡುವ ಉದ್ಯೋಗ ನಡೆಯುತ್ತದೆ. ಹುಕ್ಕೇರಿ ತಾಲೂಕಿನಲ್ಲಿಯ ಹುಕ್ಕೇರಿ ಪಾಚ್ಛಾಪುರಗಳಲ್ಲಿ ಊದಿನ ಕಡ್ಡಿಗಳನ್ನು ಮಾಡುವ ಉದ್ಯೋಗವು ನಡೆಯುತ್ತದೆ. ಗೋಕಾಕದಲ್ಲಿ ಬಣ್ಣದ ವಸ್ತುಗಳು ಮತ್ತು ಚಿಕ್ಕೋಡಿಯಲ್ಲಿ ಕಂಚಿನ ಪಾತ್ರೆಗಳು ತಯಾಗುತ್ತವೆ. ಚಿಕ್ಕೋಡಿ ತಾಲೂಕಿನಲ್ಲಿ ಬೆಳೆಯುವ ತಂಬಾಕು ಹೆಚ್ಚಾಗಿ ನಿಪ್ಪಾಣಿಯ ಪೇಟೆಯಿಂದ ಹೊರಗೆ ಹೋಗುತ್ತದೆ. ಆದ್ದರಿಂದ ಈ ತಂಬಾಕಿನಿಂದ ಬೀಡಿ ಕಟ್ಟುವ ಉದ್ಯೋಗವು ನಿಪ್ಪಾಣಿಯಲ್ಲಿ ಹೆಚ್ಚಾಗಿ ನಡೆಯುತ್ತದೆ. ಜಿಲ್ಹೆಯ ಮುಖ್ಯ ಸ್ಥಳವಾದ ಬೆಳಗಾವಿಯಲ್ಲಿ ಇನ್ನೂ ಹಲವು ಬಗೆಯ ಉದ್ಯೋಗಗಳು ನಡೆಯುತ್ತವೆ.

## ಅಭ್ಯಾಸ

1 ಕೆಳಗೆ ಕೆಲವು ಉದ್ಯೋಗಗಳನ್ನೂ ಆ ಉದ್ಯೋಗಗಳು ನಡೆಯುವ ಊರುಗಳನ್ನೂ ಕೊಟ್ಟಿದೆ ಅವುಗಳನ್ನು ಹೊಂದಿಸಿ ಬರೆಯಿರಿ.

| | |
|---|---|
| 1) ಸಕ್ಕರೆಯ ಕಾರಖಾನೆ | 1) ಖಾನಾಪುರ |
| 2) ನೂಲುವ ಗಿರಣಿ | 2) ಉಗಾರ |
| 3) ಕಾಜಿನ ಬಳೆ | 3 ಗೋಕಾಕ |
| 4) ಮನೆಗೆ ಹೊದಿಸುವ ಹೆಂಚು | 4) ಘೋಡಗೇರಿ |

# 5 ಮಾರ್ಗಗಳು

ಒಂದು ಊರವರಿಗೆ ತಮಗೆ ಅವಶ್ಯವಿರುವ ಎಲ್ಲ ಬೆಳೆಗಳನ್ನು ಬೆಳೆಯಲು, ತಮಗೆ ಅವಶ್ಯವಿರುವ ಎಲ್ಲ ಸಾಮಾನು ಸಾಹಿತ್ಯಗಳನ್ನು ತಯಾರಿಸಿಕೊಳ್ಳಲು ಶಕ್ಯವಿರುವದಿಲ್ಲ. ತಮ್ಮಲ್ಲಿಯ ಧಾನ್ಯಗಳನ್ನು, ಸಾಮಾನು ಸಾಹಿತ್ಯಗಳನ್ನು ಎರಡನೆಯ ಕಡೆಗೆ ಕಳಿಸಿಕೊಡಬೇಕಾಗುತ್ತದೆ. ತಮ್ಮಲ್ಲಿ ದೊರೆಯದ ಅವಶ್ಯವಿದ್ದ ಧಾನ್ಯಗಳನ್ನೂ, ಸಾಮಾನುಗಳನ್ನೂ ಅವು ದೊರೆಯುವ ಸ್ಥಳಗಳಿಂದ ತರಿಸಿಕೊಳ್ಳಬೇಕಾಗುತ್ತದೆ. ಹೀಗೆ ಸರಕುಗಳನ್ನು ಕಳಿಸಲಿಕ್ಕೂ, ತರಿಸಿಕೊಳ್ಳಲಿಕ್ಕೂ ಊರಿಂದ ಊರಿಗೆ ಹೋಗಿ ಬರುವದಕ್ಕೆ ದಾರಿಗಳು ಇರುವದು ಅವಶ್ಯವಿದೆ.

ಊರಿಂದ ಊರಿಗೆ ಹೋಗುವದಕ್ಕೆ ನಾವು ಚಕ್ಕಡಿ, ಟಾಂಗಾ, ಸಾಯಕಲ್ಲು, ಮೋಟರು, ಉಗಿಬಂಡಿ, ವಿಮಾನ, ಮೊದಲಾದ ಹಲವು ಬಗೆಯ ವಾಹನಗಳನ್ನು ಉಪಯೋಗಿಸುತ್ತೇವೆ. ಚಕ್ಕಡಿ, ಟಾಂಗಾ, ಸಾಯಕಲ್ಲು, ಮೋಟರ ಇವುಗಳಿಗೆ ಲೈನದಾರಿಗಳನ್ನು ಮಾಡಬೇಕಾಗುತ್ತದೆ. ಉಗಿಬಂಡಿಗಳಿಗೆ ರೈಲು ಮಾರ್ಗಗಳನ್ನೂ ವಿಮಾನಗಳು ಇಳಿಯುವದಕ್ಕೆ ಯೋಗ್ಯವಾದ ನಿಲ್ದಾಣಗಳನ್ನೂ ಮಾಡಬೇಕು. ಜನರ ಈ ಸಂಪರ್ಕಸಾಧನಗಳನ್ನು ನಾವು ಅರಿತುಕೊಳ್ಳುವದು ಅವಶ್ಯವಿರುತ್ತದೆ. ಜಿಲ್ಲೆಯಲ್ಲಿಯ ಮುಖ್ಯ ಮುಖ್ಯ ಸ್ಥಳಗಳನ್ನು ಲಕ್ಷದಲ್ಲಿಟ್ಟುಕೊಂಡು ಈ ಮಾರ್ಗಗಳನ್ನು ಮಾಡಿದ್ದಾರೆ.

**ರೈಲುಮಾರ್ಗ—** ನಮಗೆ ಅವಶ್ಯವಿದ್ದ ಸಾಮಾನುಗಳಲ್ಲಿ ಹಲವು ಪರದೇಶಗಳಿಂದ ಇಲ್ಲಿಗೆ ಬರುತ್ತವೆ. ಪರದೇಶದಿಂದ ನಮ್ಮಲ್ಲಿಗೆ ಬರುವ ಸಾಮಾನುಗಳು ಮೊದಲು ಸಮುದ್ರ ಮಾರ್ಗದಲ್ಲಿ ಉಗಿಹಡಗಗಳಿಂದ ಮುಂಬಯಿಗೆ ಬರುತ್ತವೆ. ಅಲ್ಲಿಂದ ಅವುಗಳನ್ನು ಉಗಿಬಂಡಿ, ಮೋಟರು, ಚಕ್ಕಡಿ ಮೊದಲಾದವುಗಳಿಂದ ನಮ್ಮಲ್ಲಿಗೆ

ತರಲಾಗುತ್ತದೆ. ಬೆಂಗಳೂರು ನಮ್ಮ ಮೈಸೂರ ರಾಜ್ಯದ ಮುಖ್ಯ ಪಟ್ಟಣವು. ಇದರ ಜೊತೆಗೂ ನಮ್ಮ ಸಂಬಂಧವು ಹೆಚ್ಚಾಗಿ ಬರುತ್ತದೆ. ಇದಕ್ಕಾಗಿ ಮುಂಬಯಿ ಬೆಂಗಳೂರಗಳನ್ನು ನಮ್ಮ ಜಿಲ್ಲೆಯ ಸ್ಥಳಕ್ಕೂ ನಮ್ಮ ಭಾಗಕ್ಕೂ ಜೋಡಿಸುವಂತಹ ಮಾರ್ಗರಚನೆಯು ಇರಬೇಕಾಗುತ್ತದೆ.

ಜಿಲ್ಲೆಯ ದೊಡ್ಡ ದೊಡ್ಡ ಊರುಗಳಿಗೆ ಮಧ್ಯವರ್ತಿಯಾಗುವಂತೆಯೂ ಬೆಳಗಾವಿಯನ್ನು ಬೆಂಗಳೂರು ಮುಂಬಯಿಗಳಿಗೆ ಜೋಡಿಸುವಂತೆಯೂ ಈ ಜಿಲ್ಲೆಯಲ್ಲಿ ಉಗಿಬಂಡಿಯ ಮಾರ್ಗವಿದೆ. ನಮ್ಮ ಜಿಲ್ಲೆಯ ಉತ್ತರದಲ್ಲಿ ಇರುವ ಮಿರಜಿಯು ಈ ಉಗಿಬಂಡಿಯ ದಾರಿಯ ಜಂಕಶನ್ ಸ್ಥಳವಾಗಿದೆ. ದಕ್ಷಿಣದಲ್ಲಿ ಖಾನಾಪುರ ತಾಲೂಕಿನಲ್ಲಿ ಇರುವ ಲೋಂಡಾ ಇನ್ನೊಂದು ಜಂಕಶನ್ ಸ್ಥಳವಾಗಿದೆ. ಈ ಎರಡು ಜಂಕಶನ್‌ಗಳ ನಡುವೆ ನಮ್ಮ ಜಿಲ್ಲೆಯ ದೊಡ್ಡ ದೊಡ್ಡ ಊರುಗಳಿಗೆ ಅನುಕೂಲವಾಗುವಂತೆ ಹಲವು ಸ್ಟೇಶನುಗಳನ್ನು ಮಾಡಿದ್ದಾರೆ.

ಈ ರೈಲು ದಾರಿಯ ಮೇಲೆ ಬೆಳಗಾವಿ ಜಿಲ್ಲೆಯಲ್ಲಿ ಇರುವ ಸ್ಟೇಶನುಗಳು— ಶೇಡಬಾಳ, ಉಗಾರಖುರ್ದ, ಕುಡಚಿ, ಚಿಂಚಲಿ, ರಾಯಬಾಗ, ಚಿಕ್ಕೋಡಿ ರೋಡ, ಬಾಗೇವಾಡಿ, ಘಟಪ್ರಭಾ, ಗೋಕಾಕರೋಡ, ಪಾಚ್ಛಾಪುರ, ಸುಲಧಾಳ, ಸೂಳೆಭಾವಿ, ಬೆಳಗಾವಿ, ದೇಸೂರ, ಗುಂಜಿ, ಲೋಂಡಾ.

ಲೋಂಡಾದಿಂದ ಇದರ ಒಂದು ಶಾಖೆಯು ಗೋವೆಯ ಕಡೆಗೆ ಹೋಗುತ್ತದೆ. ಇನ್ನೊಂದು ಶಾಖೆಯು ಧಾರವಾಡ ಹುಬ್ಬಳ್ಳಿಗಳ ಮೇಲಿಂದ ಬೆಂಗಳೂರಿಗೆ ಹೋಗಿದೆ. ಲೋಂಡಾದಿಂದ ಧಾರವಾಡ ಕಡೆಗೆ ಹೋಗುವ ದಾರಿಯ ಮೇಲೆ ನಮ್ಮ ಜಿಲ್ಲೆಯಲ್ಲಿ ದೇವರಾಯಿ, ನಾಗರಗಾಳಿ, ತಾವರಗಟ್ಟಿ ಎಂಬ ಚಿಕ್ಕ ಸ್ಟೇಶನುಗಳು ಇರುತ್ತವೆ.

ಉತ್ತರ ದಿಕ್ಕಿನಲ್ಲಿ ಶೇಡಬಾಳದಿಂದ ಮಿರಜಿಯ ಮೇಲೆ ಪುಣೆಗೆ ಈ ದಾರಿಯು ಹೋಗಿರುತ್ತದೆ. ಈ ರೈಲು ದಾರಿಗೆ ದಕ್ಷಿಣ ರೇಲ್ವೆ ಎಂದು ಹೆಸರಿದೆ.

**ಲೈನಮಾರ್ಗಗಳು**— ರೇಲ್ವೆ ಸ್ಟೇಶನುಗಳಿಂದ ನಮ್ಮ ಜಿಲ್ಲೆಯ ಮುಖ್ಯ ಊರುಗಳಿಗೆ ತಲುಪುವಂತೆ ಲೈನಮಾರ್ಗಗಳು ಇರುತ್ತವೆ. ಶೇಡಬಾಳದಿಂದ ಅಥಣಿಗೆ, ಚಿಕ್ಕೋಡಿ ರೋಡದಿಂದ ಚಿಕ್ಕೋಡಿಗೆ, ಘಟಪ್ರಭಾ ಸ್ಟೇಶನದಿಂದ ಹುಕ್ಕೇರಿಗೆ, ಗೋಕಾಕ ರೋಡದಿಂದ ಗೋಕಾಕಕ್ಕೆ ಲೈನ ಮಾರ್ಗಗಳು ಇರುತ್ತವೆ. ಬೆಳಗಾವಿಯಿಂದ ಬೈಲಹೊಂಗಲ, ಸವದತ್ತಿ ರಾಮದುರ್ಗಗಳಿಗೆ ಮಾರ್ಗಗಳಿರುತ್ತವೆ.

ಪುಣೆಯಿಂದ ಬೆಳಗಾವಿಯ ಮೇಲೆ ಹಾಯ್ದು ಧಾರವಾಡ ಬೆಂಗಳೂರ ಗಳಿಗೆ ಹೋಗುವ ಲೈನ ಮಾರ್ಗವು ನಮ್ಮ ಜಿಲ್ಲೆಯಲ್ಲಿಯ ಮುಖ್ಯ ಮಾರ್ಗವಾಗಿದೆ. ಈ ಲೈನ ಮಾರ್ಗದ ಮೇಲೆ ನಮ್ಮ ಜಿಲ್ಲೆಯಲ್ಲಿ ನಿಪ್ಪಾಣಿ, ಸಂಕೇಶ್ವರ, ಬೆಳಗಾವಿ, ಕಿತ್ತೂರ ಮೊದಲಾದ ದೊಡ್ಡ ಊರುಗಳು ಇರುತ್ತವೆ.

ಬೆಳಗಾವಿ ಜಿಲ್ಲೆಯ ಪೂರ್ವಕ್ಕೆ ಇರುವ ದೊಡ್ಡ ಸೊಡ್ಡ ಊರುಗಳಿಗೆ ನಮ್ಮ ಜಿಲ್ಲೆಯಲ್ಲಿಯ ದೊಡ್ಡ ದೊಡ್ಡ ಊರುಗಳನ್ನು ಜೋಡಿಸುವಂತೆ ಪೂರ್ವಪಶ್ಚಿಮ ಲೈನದಾರಿಗಳು ಕೆಳಗಿನಂತೆ ಇರುತ್ತವೆ.

1 ಶೇಡಬಾಳದಿಂದ ವಿಜಾಪುರಕ್ಕೆ ಹೋಗುವ ದಾರಿ — ಇದು ಅಥಣಿಯ ಮೇಲಿಂದ ಹೋಗುತ್ತದೆ.

2 ನಿಪ್ಪಾಣಿಯಿಂದ ಬಾಗಲಕೋಟೆಗೆ ಹೋಗುವದಾರಿ — ಇದು ನಿಪ್ಪಾಣಿಯಿಂದ ಚಿಕ್ಕೋಡಿ, ಚಿಕ್ಕೋಡಿ ರೋಡಗಳ ಮೇಲೆ ಹಾಯ್ದು ವಿಜಾಪುರ ಜಿಲ್ಲೆಯ ಮಹಾಲಿಂಗಪುರ ಮುಧೋಳಗಳ ಮೇಲಿಂದ ಬಾಗಿಲುಕೋಟೆಗೆ ಹೋಗಿದೆ.

**3** ಸಂಕೇಶ್ವರದಿಂದ ಬಾಗಿಲುಕೋಟೆಗೆ ಹೋಗುವದಾರಿ— ಇದು ಸಂಕೇಶ್ವರದಿಂದ ಹುಕ್ಕೇರಿರೋಡ, ಯಾದವಾಡಗಳ ಮೇಲಿಂದ ಬಾಗಿಲು ಕೋಟೆಗೆ ಹೋಗಿದೆ.

**4** ವೆಂಗುರ್ಲೆ ಬಾಗಿಲುಕೋಟೆ ದಾರಿ— ಇದು ಬೆಳಗಾವಿಯ ಪಶ್ಚಿಮದಲ್ಲಿರುವ ವೆಂಗುರ್ಲೆಯಿಂದ ಹೊರಟು ಬೆಳಗಾವಿ ಯರಗಟ್ಟಿ ಗಳ ಮೇಲಿಂದ ಬಾಗಿಲು ಕೋಟೆಗೆ ಹೋಗಿದೆ.

ಮೇಲಿನ ದಾರಿಗಳಲ್ಲದೆ ಗೋಕಾಕದಿಂದ ನರಗುಂದಕ್ಕೂ ಸವ ದತ್ತಿ ಧಾರವಾಡಗಳಿಗೂ ಬೆಳಗಾವಿಯಿಂದ ಕಾರವಾರಕ್ಕೂ ಲೈನದಾರಿ ಗಳಿವೆ. ಈ ಮುಖ್ಯ ಮಾರ್ಗಗಳಲ್ಲದೆ ಅವುಗಳಿಗೆ ಜಿಲ್ಲೆಯಲ್ಲಿಯ ಸಣ್ಣ ದೊಡ್ಡ ಊರುಗಳನ್ನು ಜೋಡಿಸುವಂತೆ ಕವಲು ದಾರಿಗಳು ಇರುವವು. ಈ ಲೈನದಾರಿಗಳ ಮೇಲೆ ಮೈಸೂರ ಸರಕಾರದವರು ನಡಿ ಸುವ ಬಸ್ಸುಸರ್ವಿಸಿನ ಬಸ್ಸುಗಳು ಓಡಾಡುತ್ತವೆ. ಅದರ ಮುಖ್ಯ ಕಚೇರಿಯು ಬೆಳಗಾವಿಯಲ್ಲಿ ಇರುತ್ತದೆ.

**ವಿಮಾನಮಾರ್ಗ**— ಮುಂಬಯಿಯಿಂದ ಮಂಗಳೂರು, ಬೆಂಗಳೂರುಗಳಿಗೆ ವಿಮಾನ ದಾರಿಯಿದ್ದು ಈ ದಾರಿಯ ಮೇಲೆ ಬೆಳ ಗಾವಿಯಿಂದ ಏಳು ಮೈಲಿನ ಮೇಲೆ ಸಂಬರಗಿಯ ಹತ್ತರ ವಿಮಾನ ನಿಲ್ದಾಣವಿರುತ್ತದೆ.

## ಅಭ್ಯಾಸ

1 ಬೆಳಗಾವಿ ಜಿಲ್ಲೆಯಲ್ಲಿ ಹಾಯುವ ರೇಲ್ವೆಯ ಹೆಸರೇನು ?

2 ಬೆಳಗಾವಿ ಜಿಲ್ಲೆಯಲ್ಲಿ ವಿಮಾನ ನಿಲ್ದಾಣವು ಎಲ್ಲಿ ಇರುತ್ತದೆ? ಅಲ್ಲಿಂದ ಯಾವ ಯಾವ ಊರುಗಳಿಗೆ ನಾವು ಹೋಗಬಹುದು ?

---

# 6 ಪಟ್ಟಣ ಮತ್ತು ಪೇಟೆಯ ಊರುಗಳು

ಊರುಗಳಲ್ಲಿ ಹಳ್ಳಿ, ಪೇಟೆಯ ಊರು, ಪಟ್ಟಣ ಎಂದು ಮೂರು ಪ್ರಕಾರಗಳು. ಸಾಮಾನ್ಯವಾಗಿ ಊರಿನ ಜನಸಂಖ್ಯೆಯು ಮೇಲಿಂದ ಈ ಪ್ರಕಾರಗಳನ್ನು ಮಾಡಲಾಗಿದೆ.

ಐದು ಸಾವಿರಕ್ಕಿಂತ ಕಡಿಮೆ ಜನರು ವಾಸಿಸುವ ಊರುಗಳಿಗೆ ಹಳ್ಳಿಗಳು ಎಂದು ಹೆಸರು. ತನ್ನ ಸುತ್ತಲಿನ ಹಳ್ಳಿಗಳಿಗೆ ಅವಶ್ಯವಿರುವ ವಸ್ತುಗಳನ್ನು ಪೂರೈಸಿ ಆ ಹಳ್ಳಿಗಳ ವಸ್ತುಗಳನ್ನು ಕೊಂಡು ಸಾಗಿಸುವ ವ್ಯಾಪಾರದ ಸ್ಥಳಗಳಾದ ಐದು ಸಾವಿರಕ್ಕಿಂತ ಹೆಚ್ಚಿಗೆ ಜನಸಂಖ್ಯೆ ಇರುವ ದೊಡ್ಡ ಊರುಗಳಿಗೆ ಪೇಟೆಯ ಊರುಗಳು ಎಂದು ಹೇಳುತ್ತಾರೆ. ಇಪ್ಪತ್ತೈದು ಸಾವಿರಕ್ಕಿಂತಲೂ ಹೆಚ್ಚು ಜನರು ವಾಸಿಸುವ ದೊಡ್ಡ ಊರುಗಳು ಪಟ್ಟಣಗಳು. ಬೆಳಗಾವಿ ಜಿಲ್ಲೆಯಲ್ಲಿ ಬೆಳಗಾವಿಯು ಪಟ್ಟಣವು. ಈ ಜಿಲ್ಲೆಯಲ್ಲಿ 44 ಪೇಟೆಯ ಊರುಗಳು, 1131 ಹಳ್ಳಿಗಳು ಇರುತ್ತವೆ.

## ಬೆಳಗಾವಿ

ಇದು ಜಿಲ್ಲೆಯ ಮುಖ್ಯ ಸ್ಥಳವಾಗಿರುವದಲ್ಲದೆ ಬೆಳಗಾವಿ ಭಾಗದ ಮುಖ್ಯ ಪಟ್ಟಣವೂ ಆಗಿದೆ. ಇದು ಈ ಜಿಲ್ಲೆಯಲ್ಲಿಯ ದೊಡ್ಡ ಪಟ್ಟಣ. ಒಂದು ಲಕ್ಷ ಎಂದರೆ ನೂರು ಸಾವಿರಕ್ಕಿಂತಲೂ ಹೆಚ್ಚಿಗೆ ಜನರು ಈ ಪಟ್ಟಣದಲ್ಲಿ ವಾಸಿಸುವರು. ಮಾರುತಿ ಓಣಿ, ಗಣಪತಿ ಓಣಿ, ಖಡೇಬಝಾರ ಇವು ಈ ಪಟ್ಟಣದಲ್ಲಿಯ ಮುಖ್ಯ ಓಣಿಗಳು. ಈ ಪಟ್ಟಣದ ಪೂರ್ವದಿಕ್ಕಿನಲ್ಲಿ ಒಂದು ಹಳೆಯ ಕಾಲದ ಕೋಟೆ ಇರುವದು. ಈ ಕೋಟೆಯ ಸುತ್ತಲು ಕಂದಕವಿರುವದು. ಈ ಕೋಟೆಯಲ್ಲಿ ಕಮಲಬಸ್ತಿ, ಸೋಫಾ ಮಸೀದೆ ಎಂಬ ಹಳೆಯ ಕಾಲದ ಕಟ್ಟಡಗಳು ಇರುವವು.



ಬೆಳಗಾವಿಯ ಕೋಟೆ

**ವ್ಯಾಪಾರ ಉದ್ಯೋಗ**— ಇಲ್ಲಿಯ ಪೇಟೆಯಲ್ಲಿ ಕಿರಾಣಿ ಸಾಮಾನುಗಳ ವ್ಯಾಪಾರವು ಹೆಚ್ಚಾಗಿ ನಡೆಯುತ್ತದೆ. ಶನಿವಾರ ಈ ಊರ ಸಂತೆ. ಖಾಸಬಾಗ, ಶಹಾಪುರ ಎಂಬ ಈ ಊರ ಭಾಗ ಗಳಲ್ಲಿ ಬಟ್ಟೆ ನೇಯುವ ಉದ್ಯೋಗವು ಹೆಚ್ಚಾಗಿ ನಡೆಯುತ್ತದೆ. ಶಹಾಪುರದ ಸೀರೆಗಳು ಪ್ರಸಿದ್ಧ. ಮಾಣಿಕಬಾಗ ಎಂಬ ಎಣ್ಣೆಯ ಗಿರ ಣಿಯು ಇದ್ದು ಅಲ್ಲಿ ನೆಲಗಡಲೆ (ಸೇಂಗಾ) ಮೊದಲಾದವುಗಳಿಂದ ಎಣ್ಣೆ ತೆಗೆಯುವರು. ಅಲ್ಲದೆ ಬಟ್ಟೆಗೆ ಹಚ್ಚುವ ಸಾಬಣವನ್ನು ತಯಾ ರಿಸುವರು. ಇದಲ್ಲದೆ ಈ ಊರಲ್ಲಿ ಇನ್ನೂ ಹಲವು ಸಾಬಣದ ಕಾರ ಖಾನೆಗಳು ಇರುತ್ತವೆ. ಈ ಊರಲ್ಲಿರುವ ವ್ಯಾಕ್ಸಿನ್ ಡಿಪೊ ಎಂಬಲ್ಲಿ ವೈಲಿ ತೆಗೆಯುವ 'ಲಸ' ತಯಾರಿಸುತ್ತಾರೆ.

**ಶಿಕ್ಷಣ ಸಂಸ್ಥೆ**— ಈ ಊರಲ್ಲಿ ಹಲವು ಪ್ರಾಥಮಿಕ ಶಾಲೆ ಗಳೂ ಹಾಯಸ್ಕೂಲಗಳೂ ಇರುವವಲ್ಲದೆ ಮೇಲ್ತರಗತಿಯ ಶಿಕ್ಷಣ ಕೊಡುವ ಲಿಂಗರಾಜ ಕಾಲೇಜ, ರಾಣೀ ಪಾರ್ವತೀದೇವಿ ಕಾಲೇಜ, ರಾಜಾ ಲಖಮಗೌಡ ಲಾ ಕಾಲೇಜ, ಕಾಮರ್ಸ ಕಾಲೇಜ ಎಂಬವು ಗಳು ಇರುವವು ಅಲ್ಲದೆ ಪ್ರಾಥಮಿಕ ಶಾಲೆಯ ಶಿಕ್ಷಕರಿಗೂ ಹಾಯ

ಸ್ಕೂಲ ಶಿಕ್ಷಕರಿಗೂ ಶಿಕ್ಷಣ ಕೊಡುವ ಟ್ರೇನಿಂಗ ಕಾಲೇಜುಗಳು ಇರುವವು. ಈ ಊರಲ್ಲಿಯ ಸಾರ್ವಜನಿಕ ವಾಚನಾಲಯವು ಜಿಲ್ಲೆಯಲ್ಲಿಯೇ ದೊಡ್ಡದು.

**ಕಚೇರಿಗಳು**— ಈ ಪಟ್ಟಣವು ಬೆಳಗಾವಿ ಭಾಗದ ಮುಖ್ಯ ಸ್ಥಳವಾಗಿರುವದರಿಂದ ಇಲ್ಲಿ ಈ ಭಾಗದ ಕಮಿಶನರ ಕಚೇರಿಯು ಇರುವದು. ಅಲ್ಲದೆ ಬೆಳಗಾವಿ ತಾಲೂಕಿನ ಕಚೇರಿಗಳು, ಜಿಲ್ಲೆಯ ಕಚೇರಿಗಳು ಇರುತ್ತವೆ. ಈ ಕಚೇರಿಗಳೆಲ್ಲ ಸಾಮಾನ್ಯವಾಗಿ ಪಟ್ಟಣದ ಉತ್ತರ ಭಾಗದಲ್ಲಿವೆ. ಈ ಊರ ವ್ಯವಸ್ಥೆಯನ್ನು ಕಾಯ್ದುಕೊಳ್ಳುವದಕ್ಕಾಗಿ ಮುನಿಸಿಪಾಲಿಟಿಯು ಇದ್ದು ಅದು ಊರನ್ನು ಸ್ವಚ್ಛವಾಗಿಡುವದು, ಹೊಲಸನ್ನು ಹೊರಗೆ ಹಾಕುವದು, ರಾತ್ರಿಯಲ್ಲಿ ಬೀದಿಗಳಲ್ಲಿ ದೀಪ ಹಚ್ಚುವದು, ಪಟ್ಟಣದಲ್ಲಿಯ ಜನರ ಆರೋಗ್ಯ ಇನ್ನಿತರ ಉಪಾಯಗಳನ್ನು ಯೋಚಿಸುವದು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕೊಡುವದು ಮೊದಲಾದ ಕೆಲಸಗಳನ್ನು ಮಾಡುತ್ತದೆ.

## ದೊಡ್ಡ ಊರುಗಳು

ಈ ಜಿಲ್ಲೆಯಲ್ಲಿಯ ಬೇರೆ ಬೇರೆ ತಾಲೂಕುಗಳಲ್ಲಿ ಕೆಳಗಿನಂತೆ ಪೇಟೆಯ ಊರುಗಳು ಇರುವವು. *

**ಅಥಣಿ ತಾಲೂಕು**— ಅಥಣಿ, ಶೇಡಬಾಳ, ಐನಾಪುರ, ಮದಭಾವಿ, ಕಾಗವಾಡ, ಉಗಾರ (ಖುರ್ದ), ಕೊಕಟನೂರ, ಸತ್ತಿ.

**ಚಿಕ್ಕೋಡಿ ತಾಲೂಕು**— ನಿಪ್ಪಾಣಿ, ಚಿಕ್ಕೋಡಿ, ಸದಲಗಿ, ಖಡಕಲಾಟ, ಎಕ್ಸಂಬಿ, ಬೋರಗಾಂವ, ಗಳತಗ, ಕೊಂಗನೊಳ್ಳಿ,

* ಹೆಚ್ಚು ಜನಸಂಖ್ಯೆಯ ಊರನ್ನು ಮೊದಲಿಗೆ ಕೊಟ್ಟು ಉಳಿದವುಗಳನ್ನು ಇಳಿಕೆಯ ಜನಸಂಖ್ಯೆಯ ಕ್ರಮದಲ್ಲಿ ಕೊಟ್ಟಿದೆ.

ಕಾಂಪಗಿ, ಭೋಜ, ಅಕ್ಕೋಳ, ಬೆಡಕಿಹಾಳ, ಅಂಕಲಿ, ಕಬ್ಬೂರ, ಕೇರೂರ.

**ರಾಯಬಾಗ ಮಹಾಲ**— ಕುಡಚಿ, ರಾಯಬಾಗ, ಚಿಂಚಲಿ

**ಹುಕ್ಕೇರಿ ತಾಲೂಕು**— ಸಂಕೇಶ್ವರ, ಹುಕ್ಕೇರಿ, ಯಮಕನಮರಡಿ.

**ಬೆಳಗಾವಿ ತಾಲೂಕು**— ಆನಗೋಳ, ಎಳ್ಳೂರ, ವಡಗಾಂವ.

**ಖಾನಾಪುರ ತಾಲೂಕು**— ಖಾನಾಪುರ, ನಂದಗಡ.

**ಗೋಕಾಕ ತಾಲೂಕು**--ಗೋಕಾಕ, ಕೊಣ್ಣೂರ, ಖನಗಾಂವ.

**ಬೈಲಹೊಂಗಲ ತಾಲೂಕು**— ಬೈಲಹೊಂಗಲ, ಕಿತ್ತೂರ.

**ಸವದತ್ತಿ ತಾಲೂಕು**—ಸವದತ್ತಿ, ಮುನವಳ್ಳಿ, ಮುರಗೋಡ.

**ರಾಮದುರ್ಗ ತಾಲೂಕು**— ರಾಮದುರ್ಗ, ಕಟಕೋಳ

## ಜಾತ್ರೆಗಳು

ಸಾಮಾನ್ಯವಾಗಿ ಪ್ರತಿಯೊಂದು ಊರಲ್ಲಿ ದೇವರ ಹೆಸರಿನಲ್ಲಿ ಜಾತ್ರೆಗಳು ಆಗುತ್ತಿರುತ್ತವೆ. ಆದರೆ ಬೆಳಗಾವಿ ಜಿಲ್ಲೆಯಲ್ಲಿ ಮೂರು ಸ್ಥಳಗಳಲ್ಲಿ ಕೂಡುವ ಜಾತ್ರೆಗಳು ಪ್ರಸಿದ್ಧವಾಗಿವೆ. 1 ಸವದತ್ತಿಯ ಎಲ್ಲಮ್ಮನ ಜಾತ್ರೆ 2 ಚಿಂಚಲಿಯ ಮಾಯಕ್ಕನ ಜಾತ್ರೆ 3 ಗೊಡಚಿಯ ವೀರಭದ್ರ ದೇವರ ಜಾತ್ರೆ.

**ಸವದತ್ತಿಯ ಎಲ್ಲಮ್ಮ**--- ಸವದತ್ತಿಯಿಂದ ಐದು ಮೈಲಿನ ಮೇಲೆ ಗುಡ್ಡದಲ್ಲಿ ಎಲ್ಲಮ್ಮನ ಗುಡಿ ಇರುತ್ತದೆ. ಇದು ಈ ಜಿಲ್ಲೆಯಲ್ಲಿ ಹೆಸರಾದ ದೊಡ್ಡ ದೇವಸ್ಥಾನ. ಚೈತ್ರ ಹುಣ್ಣಿವೆಗೂ ಮಾರ್ಗಶೀರ್ಷ ಹುಣ್ಣಿವೆಗೂ ಇಲ್ಲಿ ದೊಡ್ಡ ಜಾತ್ರೆಯಾಗುತ್ತದೆ.



ಸವದತ್ತಿ ಎಲ್ಲಮ್ಮನ ಗುಡಿ

**ಚಿಂಚಲಿಯ ಮಾಯಕ್ಕ—** ರಾಯಬಾಗ ಮಹಾಲದಲ್ಲಿರುವ ಚಿಂಚಲಿಯಲ್ಲಿ ಮಾಯಕ್ಕನ ಗುಡಿಯಿದೆ. ಈ ದೇವರ ಜಾತ್ರೆಯು ವರುಷದಲ್ಲಿ ನಾಲ್ಕು ಸಾರೆ ಆಗುತ್ತದೆ. ಮಾಘ ಹುಣ್ಣಿವೆಗೆ ದೊಡ್ಡ ಜಾತ್ರೆಯು ಕೂಡುವದು. ಈ ಜಾತ್ರೆಯಲ್ಲಿ ದನಗಳ ವ್ಯಾಪಾರವು ಹೇರಾಗಿ ಆಗುತ್ತದೆ.

**ಗೊಡಚಿಯ ವೀರಭದ್ರ—** ರಾಮದುರ್ಗ ತಾಲೂಕಿನಲ್ಲಿರುವ ಗೊಡಚಿಯಲ್ಲಿ ವೀರಭದ್ರದೇವರ ಗುಡಿಯಿದೆ. ಮಾರ್ಗಶೀರ್ಷ ಹುಣ್ಣಿವೆಗೆ ಈ ಊರಲ್ಲಿ ದೊಡ್ಡ ಜಾತ್ರೆಯಾಗುತ್ತದೆ.

1 ಬೆಳಗಾವಿಯಲ್ಲಿ ಯಾವ ಯಾವ ಕಾಲೇಜುಗಳು ಇರುವವು?

2 ಐದುಸಾವಿರಕ್ಕಿಂತ ಹೆಚ್ಚಿಗೆ ಜನವಸತಿ ಇರುವ ಪೇಟೆಯ ಊರುಗಳು ಯಾವ ತಾಲೂಕಿನಲ್ಲಿ ಹೆಚ್ಚಿಗೆ ಇರುತ್ತವೆ?

3 ಬೆಳಗಾವಿ ಜಿಲ್ಲೆಯಲ್ಲಿ ಆಗುವ ದೊಡ್ಡ ಜಾತ್ರೆಗಳು ಯಾವವು?

# 7 ಸ್ಥಾನಿಕ ಪ್ರಜಾರಾಜ್ಯ

## ಗ್ರಾಮಪಂಚಾಯತಿಗಳು

ನಾವು ಆರೋಗ್ಯದಿಂದ ಜೀವಿಸಬೇಕಾದರೆ ನಮ್ಮ ಮನೆಯನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು. ಅದು ಗಾಳಿ ಬೆಳಕುಗಳಿಂದ ಕೂಡಿ ಆರೋಗ್ಯಕರವಾಗಿರಬೇಕು. ಒಳ್ಳೆಯ ಸ್ಥಿತಿಯಲ್ಲಿ ಇರಬೇಕು. ಈ ರೀತಿಯಲ್ಲಿ ಮನೆಯನ್ನು ಇಟ್ಟುಕೊಳ್ಳುವದು ಮನೆಯುವರ ಕೆಲಸ. ಪ್ರತಿಯೊಂದು ಮನೆಯುವರು ತಮ್ಮದನ್ನಷ್ಟೇ ನೋಡಿಕೊಂಡರೆ ಆರೋಗ್ಯದಿಂದ ಜೀವಿಸುವದು ಸಾಧ್ಯವಾಗುವದಿಲ್ಲ. ಊರವರೆಲ್ಲರು ಆರೋಗ್ಯದಿಂದ ಜೀವಿಸಬೇಕಾದರೆ ಮನೆಯಂತೆ ನಮ್ಮ ಊರಲ್ಲಿಯ ದಾರಿಗಳು ಸ್ವಚ್ಛವಾಗಿರಬೇಕು. ಕೆರೆ ಬಾವಿಗಳು ಒಳ್ಳೆಯ ಸ್ಥಿತಿಯಲ್ಲಿರಬೇಕು. ಸ್ವಚ್ಛವಾಗಿರಬೇಕು. ಹೀಗೆ ಊರನ್ನು ಇಟ್ಟುಕೊಳ್ಳುವದು ಊರಲ್ಲಿಯ ಯಾರೊಬ್ಬರದೇ ಕೆಲಸವಲ್ಲ. ಊರವರೆಲ್ಲರು ಕೂಡಿ ಅದನ್ನು ಮಾಡಬೇಕಾಗುವದು. ಇದಕ್ಕಾಗಿ ಊರವರೆಲ್ಲ ಕೂಡಿ ಒಂದು ಸಂಸ್ಥೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಹಳ್ಳಿಗಳಲ್ಲಿ ಗ್ರಾಮಪಂಚಾಯತಿ ಎಂಬ ಸಂಸ್ಥೆಯು ಇರುತ್ತದೆ.

ಊರವರೆಲ್ಲರು ಕೂಡಿ ಪ್ರತಿ ನಾಲ್ಕು ವರುಷಗಳಿಗೊಮ್ಮೆ ತಮ್ಮ ಊರ ಮುಂದಾಳುಗಳನ್ನು ಗೊತ್ತು ಮಾಡುತ್ತಾರೆ. ಯಾರಿಗೆ ಹೆಚ್ಚು ಜನರ ಬೆಂಬಲವಿರುವದೋ ಅವರು ಊರ ಮುಂದಾಳುಗಳೆಂದು ತಿಳಿಯಲಾಗುತ್ತದೆ. ಇವರೇ ಗ್ರಾಮಪಂಚಾಯತಿಯ ಸದಸ್ಯರು. ಇವರು ತಮ್ಮನ್ನು ಆರಿಸಿಕೊಟ್ಟ ಅವಧಿಯಲ್ಲಿ ಗ್ರಾಮಪಂಚಾಯತಿಯ ಕೆಲಸಗಳನ್ನು ನೋಡಿಕೊಳ್ಳುತ್ತಾರೆ. ಪ್ರತಿಯೊಂದು ಗ್ರಾಮಪಂಚಾಯತಿಯಲ್ಲಿ ಆ ಊರ ಜನಸಂಖ್ಯೆಯ ಪ್ರಮಾಣದಲ್ಲಿ ೧೧ ರಿಂದ ೧೯ ಜನ ಸದಸ್ಯರು ಇರುವರು. ನಿಮ್ಮ ಊರ ಪಂಚಾಯತಿಯಲ್ಲಿ ಎಷ್ಟು ಜನ ಸದಸ್ಯರಿರುವರು? ಈಗ ಯಾರು ಯಾರು ಇರುವರು?

ಗ್ರಾಮಪಂಚಾಯತಿಯ ಸದಸ್ಯರು ತಮ್ಮೊಳಗಿನವನೊಬ್ಬನನ್ನು ಮುಖ್ಯಸ್ಥನನ್ನಾಗಿ ಆರಿಸಿಕೊಳ್ಳುವರು. ಹೀಗೆ ಆರಿಸಿಕೊಂಡ ಮುಖಂಡ ನಿಗೆ ಚೆಯರಮನ್ ಎಂದು ಹೇಳುತ್ತಾರೆ. ಗ್ರಾಮಪಂಚಾಯತಿ ಯವರು ತಮ್ಮ ಊರಿಗೆ ಸಂಬಂಧಿಸಿದ ಹಲವು ಕೆಲಸಗಳನ್ನು ಮಾಡುತ್ತಾರೆ.

ಪ್ರತಿಯೊಂದು ಊರಲ್ಲಿ ಜನರ ಸಂಚಾರಕ್ಕೆ ಅನುಕೂಲವಾದ ದಾರಿಗಳು ಇರುವದು ಅವಶ್ಯವಿರುತ್ತದೆ. ಇಂಥ ದಾರಿಗಳನ್ನು ಮಾಡಿ ಸುವದು, ಅವುಗಳನ್ನು ಸ್ವಚ್ಛವಾಗಿಡುವದು, ಒಳ್ಳೆಯ ಸ್ಥಿತಿಯಲ್ಲಿ ಇಡುವದು, ರಾತ್ರಿಯಲ್ಲಿ ಆ ದಾರಿಗಳ ಮೇಲೆ ಅಡ್ಡಾಡುವದಕ್ಕೆ ಅನು ಕೂಲವಾಗುವಂತೆ ದೀಪಗಳನ್ನು ಹಚ್ಚುವದು ಈ ಕೆಲಸಗಳನ್ನು ಗ್ರಾಮಪಂಚಾಯತಿಯು ಮಾಡುತ್ತದೆ.

ಊರ ಜನರಿಗೆ ಕುಡಿಯುವದಕ್ಕಾಗಿಯೂ ಬಳಕೆಗಾಗಿಯೂ ನೀರು ಅತ್ಯಾವಶ್ಯಕವಿರುತ್ತದೆ. ಈ ನೀರು ಹಳ್ಳಿಗಳಿಗೆ ಕೆರೆ, ಬಾವಿ, ಹೊಳೆ, ಹಳ್ಳ ಮೊದಲಾದ ಜಲಾಶಯಗಳಿಂದ ದೊರೆಯುವದು. ಕುಡಿ ಯುವ ನೀರನ್ನು ಸ್ವಚ್ಛವಾಗಿಡುವದು, ಊರ ಜನರಿಗೆ ಅನು ಕೂಲವಾಗುವಂತೆ ಬಾವಿ ಮೊದಲಾದವುಗಳನ್ನು ತೆಗಿಸುವದು, ಕಟ್ಟಿಸು ವದು ಮೊದಲಾದ ಕೆಲಸಗಳನ್ನು ಗ್ರಾಮಪಂಚಾಯತಿಯು ಮಾಡು ತ್ತದೆ.

ಇದಲ್ಲದೆ ಸಾರ್ವಜನಿಕ ಪಾಯಖಾನೆಗಳನ್ನೂ ಕಾಲುಮಡಿ ಸ್ಥಳಗಳನ್ನೂ ಕಟ್ಟಿಸುವದು, ಗೊಬ್ಬರ ಸಂಗ್ರಹಿಸುವದು, ಊರಲ್ಲಿ ರೋಗಗಳು ಹಬ್ಬದಂತೆ ಪ್ರತಿಬಂಧಕ ಉಪಾಯ ಕೈಕೊಳ್ಳುವದು ಮೊದಲಾದ ಕೆಲಸಗಳನ್ನೂ ಗ್ರಾಮಪಂಚಾಯತಿಯು ಮಾಡುತ್ತದೆ. ಇವೆಲ್ಲ ಕೆಲಸಗಳ ಮೇಲ್ವಿಚಾರಣೆ ಮಾಡುವದಕ್ಕಾಗಿಯೂ ಪಂಚಾ ಯತಿಯ ಲೆಕ್ಕಪತ್ರಗಳನ್ನು ಸರಿಯಾಗಿ ಇಡುವದಕ್ಕಾಗಿಯೂ ಸರಕಾರ

ದಿಂದ ನೇಮಿಸಲ್ಪಟ್ಟ ಸೆಕ್ರೆಟರಿ ಎಂಬ ಅಧಿಕಾರಿಯು ಇರುತ್ತಾನೆ. ಅವನ ಕೈಕೆಳಗೆ ಗ್ರಾಮಪಂಚಾಯತಿಯಿಂದ ನೇಮಿಸಲ್ಪಟ್ಟ ನವಕರು ಇರುತ್ತಾರೆ.

ಗ್ರಾಮಪಂಚಾಯತಿಯು ತನ್ನ ಕೆಲಸಗಳನ್ನು ಸರಿಯಾಗಿ ಸಾಗಿಸುವದಕ್ಕಾಗಿ ಊರಲ್ಲಿಯ ಮನೆಗಳು, ಚಕ್ಕಡಿ ಮೊದಲಾದ ವಾಹನಗಳು ಇವುಗಳ ಮೇಲೆ ಕರ ಹೇರುತ್ತದೆ. ಉದ್ಯೋಗ ವ್ಯಾಪಾರ ಮೊದಲಾದವುಗಳ ಮೇಲೆಯೂ ಕರ ಹಾಕುತ್ತದೆ. ಇದಲ್ಲದೆ ಸರಕಾರದವರು ಆ ಊರ ಭೂಮಿಯ ತೆರಿಗೆಯಿಂದ ಬಂದ ಹಣವಲ್ಲಿ ಕೆಲವು ಭಾಗವನ್ನು ಪಂಚಾಯತಿಗೆ ಕೊಡುತ್ತಾರೆ.

## ಮುನಿಸಿಪಾಲಿಟಿ

ಊರು ದೊಡ್ಡದಿದ್ದಂತೆ ಅದರ ಅವಶ್ಯಕತೆಗಳು ಬೆಳೆಯುತ್ತ ಹೋಗುತ್ತವೆ. ಆ ಅವಶ್ಯಕತೆಗಳನ್ನು ಪೂರಯಿಸಿಕೊಳ್ಳುವದಕ್ಕೆ ಹೆಚ್ಚು ಹಣವೂ, ಅಧಿಕಾರವೂ ಬೇಕಾಗುತ್ತವೆ. ಆದ್ದರಿಂದ ಅಂಥ ದೊಡ್ಡ ಊರುಗಳಲ್ಲಿ ಗ್ರಾಮಪಂಚಾಯತಿಗಳಿಗಿಂತ ಹೆಚ್ಚಿಗೆ ಅಧಿಕಾರ ಪಡೆದ ಮುನಿಸಿಪಾಲಿಟಿಗಳೆಂಬ ಸಂಸ್ಥೆಗಳು ಇರುತ್ತವೆ. ಗ್ರಾಮಪಂಚಾಯತಿಯ ಸದಸ್ಯರನ್ನು ಆರಿಸುವಂತೆಯೇ ಮುನಿಸಿಪಾಲಿಟಿಯ ಸದಸ್ಯರನ್ನು ಊರವರು ಆರಿಸುವರು. ಪ್ರತಿಯೊಂದು ಮುನಿಸಿಪಾಲಿಟಿಯಲ್ಲಿ ಆ ಊರ ಜನಸಂಖ್ಯೆಗೆ ಅನುಸರಿಸಿ ಸದಸ್ಯರು ಇರುತ್ತಾರೆ. ಈ ಸದಸ್ಯರ ಮುಖಂಡನಿಗೆ ಅಧ್ಯಕ್ಷನೆಂದು ಹೆಸರು. ಗ್ರಾಮಪಂಚಾಯತಿಗೆ ಸೆಕ್ರೆಟರಿ ಇದ್ದಂತೆ ಮುನಿಸಿಪಾಲಿಟಿಗೂ ಒಬ್ಬ ಸೆಕ್ರೆಟರಿಯು ಇರುತ್ತಾನೆ. ಮುನಿಸಿಪಾಲಿಟಿಯು ಗ್ರಾಮಪಂಚಾಯತಿಯು ಮಾಡುವ ಕೆಲಸಗಳನ್ನೆಲ್ಲ ಮಾಡುವದಲ್ಲದೆ ಊರಲ್ಲಿ ಆಸ್ಪತ್ರೆಗಳನ್ನೂ ದವಾಖಾನೆಗಳನ್ನೂ ತೆಗೆಯುವದು, ಸಾರ್ವಜನಿಕ ವಾಚನಾಲಯ ಉದ್ಯಾನ

ಮೊದಲಾದವುಗಳನ್ನು ನಡಿಸುವದು ಮೊದಲಾದ ಕೆಲಸಗಳನ್ನೂ ಮಾಡುತ್ತದೆ. ಬೆಳಗಾವಿ ಜಿಲ್ಲೆಯ ಬೆಳಗಾವಿಯಲ್ಲಿ ದೊಡ್ಡ ಮುನಿಸಿಪಾಲಿಟಿ ಇರುತ್ತದೆ. ಅಲ್ಲದೆ ಅಥಣಿ, ನಿಪ್ಪಾಣಿ, ಗೋಕಾಕ, ಬೈಲಹೊಂಗಲ, ಸವದತ್ತಿಗಳಲ್ಲಿ ಚಿಕ್ಕ ಮುನಿಸಿಪಾಲಿಟಿಗಳು ಇರುತ್ತವೆ.

## ತಾಲೂಕ ಅಭಿವೃದ್ಧಿ ಬೋರ್ಡು

ನಮ್ಮ ಮನೆಯು ನಮ್ಮ ಊರಿನ ಒಂದು ಭಾಗವಾಗಿರುವಂತೆ ನಮ್ಮ ಊರು ನಮ್ಮ ತಾಲೂಕಿನಲ್ಲಿಯ ಒಂದು ಗ್ರಾಮವಾಗಿದೆ. ನಮ್ಮ ಮನೆಯವರ ಜೀವನವು ನಮ್ಮ ಊರ ಜನರಿಗೆ ಹೊಂದಿಕೊಂಡಿರುವಂತೆಯೇ ನಮ್ಮ ಊರವರ ಜೀವನವು ನಮ್ಮ ತಾಲೂಕಿನ ಜನರ ಜೀವನದೊಂದಿಗೆ ಹೊಂದಿಕೊಂಡಿದೆ. ಆದ್ದರಿಂದ ಊರ ಅನುಕೂಲತೆಗಳನ್ನು ನೋಡಿಕೊಳ್ಳುವದಕ್ಕೆ ಗ್ರಾಮಪಂಚಾಯತಿ ಇಲ್ಲವೆ ಮುನಿಸಿಪಾಲಿಟಿಯು ಇರುವಂತೆ ತಾಲೂಕಿನ ಅನುಕೂಲತೆಗಳನ್ನು ನೋಡಿಕೊಳ್ಳಲು "ತಾಲೂಕ ಅಭಿವೃದ್ಧಿ ಬೋರ್ಡ" ಎಂಬ ಸಂಸ್ಥೆಯು ಇರುತ್ತದೆ. ಈ ಸಂಸ್ಥೆಯ ಸದಸ್ಯರನ್ನು ತಾಲೂಕಿನ ಜನರೆಲ್ಲರು ಕೂಡಿ ಆರಿಸುತ್ತಾರೆ. ಗ್ರಾಮಪಂಚಾಯತಿಗಳಂತೆಯೇ ತಾಲೂಕ ಬೋರ್ಡಿನ ಸದಸ್ಯರನ್ನು ನಾಲ್ಕು ವರುಷಗಳಿಗೊಮ್ಮೆ ಆರಿಸಲಾಗುತ್ತದೆ. ತಾಲೂಕಿನ ಜನಸಂಖ್ಯೆಗೆ ಅನುಸರಿಸಿ ೧೫ ರಿಂದ ೧೯ ಸದಸ್ಯರು ಈ ತಾಲೂಕ ಅಭಿವೃದ್ಧಿ ಬೋರ್ಡಿನಲ್ಲಿ ಇರುತ್ತಾರೆ.

ತಾಲೂಕ ಅಭಿವೃದ್ಧಿ ಬೋರ್ಡು ತನ್ನ ತಾಲೂಕಿನಲ್ಲಿಯ ಗ್ರಾಮಗಳನ್ನು ಒಂದಕ್ಕೊಂದು ಹೊಂದಿಸುವಂತೆ ದಾರಿಗಳನ್ನು ರಚಿಸುತ್ತದೆ. ಅವುಗಳನ್ನು ಸುವ್ಯವಸ್ಥಿತವಾಗಿ ಇಡುತ್ತದೆ. ಆ ದಾರಿಗಳ ಬದಿಯಲ್ಲಿ ನೆರಳಾಗುವಂತೆ ಗಿಡಮರಗಳನ್ನು ಹಚ್ಚುತ್ತದೆ. ಪ್ರವಾಸಿಕರ ಬಂಗಲೆಗಳನ್ನೂ ಧರ್ಮಶಾಲೆಗಳನ್ನೂ ಕಟ್ಟಿಸಿ ಸುಸ್ಥಿತಿಯಲ್ಲಿ ಇಡುತ್ತದೆ. ತಾಲೂಕಿನ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆಯ ಕಟ್ಟಡಗಳನ್ನೂ

ಆಸ್ಪತ್ರೆಗಳನ್ನೂ ಕಟ್ಟಿಸುತ್ತದೆ. ತಾಲೂಕಿನ ಜನರ ಆರೋಗ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ಮೈಲಿ ಚುಚ್ಚಿಸುವದು, ರೋಗಗಳು ಹಬ್ಬದಂತೆ ಇನಾಕ್ಯುಲೇಶನ್ ಮೊದಲಾದವನ್ನು ಮಾಡಿಸುವದು ಔಷಧಿಗಳನ್ನು ಪೂರಯಿಸುವದು ಮೊದಲಾದ ಕಾರ್ಯಗಳನ್ನು ಮಾಡುತ್ತದೆ. ಚಿಕ್ಕಪುಟ್ಟ ನೀರಾವರಿ ಯೋಜನೆಗಳನ್ನು ಮಾಡುತ್ತದೆ. ಅಲ್ಲದೆ ತಾಲೂಕಿನಲ್ಲಿಯ ಗ್ರಾಮಪಂಚಾಯತಿಗಳ ಕೆಲಸದ ಮೇಲ್ವಿಚಾರಣೆ ಮಾಡುತ್ತದೆ.

ತಾಲೂಕ ಅಭಿವೃದ್ಧಿ ಮಂಡಳದ ಕೆಲಸವು ಸರಿಯಾಗಿ ನಡೆಯುವದಕ್ಕೆ ಸರಕಾರವು ಆ ತಾಲೂಕಿನ ತೆರಿಗೆಯಲ್ಲಿ ಕೆಲವೊಂದು ಭಾಗವನ್ನು ಕೊಡುತ್ತದೆ. ಅಲ್ಲದೆ ತಾಲೂಕಬೋರ್ಡು ಆ ತಾಲೂಕಿನ ಭೂಮಿಯ ತೆರಿಗೆಯ ಮೇಲೆ ಲೋಕಲ್ ಸೆಸ್ ವಸೂಲ ಮಾಡುತ್ತದೆ,

ತಾಲೂಕು ಅಭಿವೃದ್ಧಿ ಮಂಡಳದ ಸದಸ್ಯರು ತಮ್ಮೊಳಗಿಂದ ಒಬ್ಬ ಮುಖ್ಯಸ್ಥನನ್ನು ಆರಿಸಿಕೊಳ್ಳುತ್ತಾರೆ. ಅವನಿಗೆ ಅಧ್ಯಕ್ಷ ಎಂದು ಹೆಸರು. ತಾಲೂಕಿನ ಮುಖ್ಯಾಧಿಕಾರಿಯಾದ ತಹಶಿಲದಾರನು ಇಲ್ಲವೆ ಸರಕಾರದಿಂದ ನೇಮಿಸಲ್ಪಟ್ಟ ತಾಲೂಕು ಅಭಿವೃದ್ಧಿ ಘಟಕದ ಅಧಿಕಾರಿಯು ಮುಖ್ಯ ಕಾರ್ಯಾಧಿಕಾರಿಯಾಗಿ ಕೆಲಸ ಸಾಗಿಸುತ್ತಾನೆ.

ಹೀಗೆ ನಮ್ಮ ಊರಿನ ತಾಲೂಕಿನ ಆಡಳತೆಯು ನಾವು ಆರಿಸಿಕೊಟ್ಟ ನಮ್ಮ ಮುಂದಾಳುಗಳಿಂದಲೇ ನಡೆಯುತ್ತದೆ.

## ಅಭ್ಯಾಸ

1 ಗ್ರಾಮಪಂಚಾಯತಿಯ ಸದಸ್ಯರ ಆಯ್ಕೆಯು ಎಷ್ಟು ದಿವಸಗಳಿಗೊಮ್ಮೆ ನಡೆಯುವದು ?

2 ಗ್ರಾಮಪಂಚಾಯತಿಯು ಯಾವ ಯಾವ ಕೆಲಸಗಳನ್ನು ಮಾಡುವದು ?

3 ತಾಲೂಕ ಅಭಿವೃದ್ಧಿ ಬೋರ್ಡಿನ ಕೆಲಸಗಳೇನು ?

4 ಗ್ರಾಮಪಂಚಾಯತಿಗಳಿಗೆ ಹಣವು ಯಾವ ಯಾವ ರೀತಿಯಲ್ಲಿ ಬರುವದು ?

5 ತಾಲೂಕ ಅಭಿವೃದ್ಧಿ ಬೋರ್ಡಿನ ಮುಖ್ಯಾಧಿಕಾರಿಯು ಯಾರು ?

# 8 ಆಡಳಿತ

ಗ್ರಾಮಪಂಚಾಯತಿಗಳು, ಮುನಿಸಿಪಾಲಿಟಿಗಳು ತಮ್ಮ ತಮ್ಮ ಊರಿನ ಅವಶ್ಯಕತೆಗಳನ್ನು ಪೂರಯಿಸುತ್ತವೆ. ತಾಲೂಕ ಅಭಿವೃದ್ಧಿ ಬೋರ್ಡು ಆ ತಾಲೂಕಿನ ಅವಶ್ಯಕತೆಗಳನ್ನು ಪೂರಯಿಸುತ್ತದೆ. ತಮಗೆ ಸಂಬಂಧಿಸಿದ ಪ್ರದೇಶಗಳ ಸ್ವಚ್ಛತೆ, ಆರೋಗ್ಯ ಇವುಗಳನ್ನು ಕಾಯ್ದುಕೊಳ್ಳುವದೇ ಇವುಗಳ ಮುಖ್ಯ ಕೆಲಸ. ಇಷ್ಟರಿಂದಲೇ ನಮ್ಮ ಎಲ್ಲ ತೊಡಕು ತೊಂದರೆಗಳು ದೂರಾಗುವದಿಲ್ಲ. ಊರಲ್ಲಿ ಕಳವು ಬಡಿದಾಟಗಳು, ಕೊಲೆ ಸುಲಿಗೆಗಳು ಆಗದಂತೆ ಮಾಡಬೇಕು. ಎಲ್ಲರಿಗೂ ಸರಿಯಾದ ನ್ಯಾಯ ದೊರೆಯಬೇಕು. ಇನ್ನೂ ಎಷ್ಟೋ ಕೆಲಸಗಳು ಇರುತ್ತವೆ. ಇವೆಲ್ಲ ಕಾರ್ಯಗಳು ಸರಿಯಾಗಿ ನಡೆಯುವಂತೆ ಸರಕಾರವು ವ್ಯವಸ್ಥೆ ಮಾಡಿರುತ್ತದೆ. ನಾವು ಆರಿಸಿಕೊಟ್ಟ ನಮ್ಮ ಪ್ರತಿನಿಧಿಗಳಿಂದಲೇ ಈ ಸರಕಾರವಾಗಿರುತ್ತದೆ. ಸರಕಾರವು ನಮ್ಮ ದೇಶಕ್ಕೆ, ನಮ್ಮ ರಾಜ್ಯಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳು ಸರಿಯಾಗಿ ಸಾಗುವಂತೆ, ಅಧಿಕಾರಿಗಳನ್ನೂ ನವಕರರನ್ನೂ ನೇಮಿಸುತ್ತದೆ. ಅವರು ತಮ್ಮ ತಮ್ಮ ಸ್ಥಾನದಲ್ಲಿದ್ದು ಪ್ರಜಾಹಿತದ ಕಾರ್ಯಗಳನ್ನು ಮಾಡುತ್ತಿದ್ದಾರೆ.

ಹಳ್ಳಿಗಳಲ್ಲಿ ಗ್ರಾಮಪಂಚಾಯತಿಗಳ ಕಾರ್ಯಗಳನ್ನು ನೋಡಿಕೊಳ್ಳಲಿಕ್ಕೆ ಸರಕಾರದಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಇರುವರಷ್ಟೇ. ಇವರು ಗ್ರಾಮಪಂಚಾಯತಿಗಳ ಕೆಲಸಗಳನ್ನೂ ಗ್ರಾಮಕ್ಕೆ ಸಂಬಂಧಿಸಿದ ಸರಕಾರದ ಬೇರೆ ಕೆಲಸಗಳನ್ನೂ ನೋಡಿಕೊಳ್ಳುತ್ತಾರೆ. ಈ ಗ್ರಾಮಾಧಿಕಾರಿಗಳಲ್ಲದೆ ತಾಲೂಕುಗಳಲ್ಲಿಯೂ ಜಿಲ್ಲೆಗಳಲ್ಲಿಯೂ ಹಲವರು ಸರಕಾರದ ಅಧಿಕಾರಿಗಳು, ನವಕರರು ಇರುವರು.

## ತಾಲೂಕಿನ ಅಧಿಕಾರಿಗಳು

**ತಹಸಿಲದಾರ**— ಇವರು ತಾಲೂಕಿನ ಮುಖ್ಯ ಅಧಿಕಾರಿಗಳು. ಗ್ರಾಮಗಳಲ್ಲಿರುವ ಗ್ರಾಮಾಧಿಕಾರಿಗಳ ಕೆಲಸದ ಮೇಲ್ವಿಚಾರಣೆ ಮಾಡುವರು. ತಾಲೂಕಿನಲ್ಲಿಯ ಗ್ರಾಮಗಳ ಕಂದಾಯವನ್ನು ವಸೂಲ ಮಾಡುವದು, ಭೂಮಿಗಳು ಯೋಗ್ಯ ಹಕ್ಕುದಾರನ ಕಡೆಗೆ ಇರುವಂತೆ ನೋಡಿಕೊಳ್ಳುವದು, ಶಾಂತತೆ ಕಾಯ್ದುಕೊಳ್ಳುವದು ಇವು ತಹಸಿಲದಾರರ ಮುಖ್ಯ ಕೆಲಸಗಳು. ಪೇಠಾ ಸ್ಥಳಗಳಲ್ಲಿ ಡೆಪ್ಯುಟಿ ತಹಸಿಲದಾರನು ಈ ಕೆಲಸಗಳನ್ನು ಮಾಡುವನು.

**ಫೌಜದಾರ**— ತಾಲೂಕಿನಲ್ಲಿ ಕಳವು, ಬಡಿದಾಟ, ಕೊಲೆ ಸುಲಿಗೆಗಳು ಆಗದಂತೆ ವ್ಯವಸ್ಥೆ ಇಡುವದು, ಆದವುಗಳನ್ನು ಗೊತ್ತು ಹಚ್ಚಿ ಅಪರಾಧ ಮಾಡಿದವರೆಂದು ಕಂಡು ಬಂದವರ ಮೇಲೆ ಖಟ್ಲೆ ಹಾಕುವದು ಇವು ಫೌಜದಾರನ ಕೆಲಸಗಳು. ಒಂದೊಂದು ತಾಲೂಕಿನಲ್ಲಿ ಇಬ್ಬರು ಮೂವರು ಫೌಜದಾರರು ಇರುವರು. ಅವರು ತಮಗೆ ನೇಮಿಸಿಕೊಟ್ಟ ಭಾಗದಲ್ಲಿ ಈ ಕೆಲಸ ಮಾಡುವರು. ಇವರ ಸಹಾಯಕ್ಕೆ ಕಾನ್‌ಸ್ಟೇಬಲ್ (ಪೋಲೀಸ ಶಿಪಾಯಿ) ಎಂಬ ನವಕರರು ಇರುವರು.

**ಸಬ್‌ಜಜ್ಜ**— ತಾಲೂಕಿನ ಜನರ ಕೊಡಕೊಳ್ಳುವ ವ್ಯವಹಾರದಲ್ಲಿ ಬಂದ ಜಗಳ, ಸ್ಥಾವರ ಆಸ್ತಿಗಳಾದ ಹೊಲಮನೆಗಳ ಬಗ್ಗೆ ಬಂದ ಜಗಳ ಇವುಗಳನ್ನು ವಿಚಾರಿಸಿ ನಿರ್ಣಯ ಕೊಡುವ ಅಧಿಕಾರಿಗೆ ಸಬ್‌ಜಜ್ಜ ಎಂದು ಹೆಸರು. ಇವನು ತಾಲೂಕಿನ ಸ್ಥಳದಲ್ಲಿ ಇರುವನು. ಕೆಲಸವು ಕಡಿಮೆ ಇರುವ ಕಡೆಗಳಲ್ಲಿ ಎರಡು ತಾಲೂಕುಗಳಿಗೆ ಕೂಡಿ ಒಬ್ಬ ಸಬ್‌ಜಜ್ಜನಿರುವನು.

**ಅಸಿಸ್ಟಂಟ ಡೆಪ್ಯುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ** — ಈ ಅಧಿಕಾರಿಗಳು ಹಳ್ಳಿಗಳಲ್ಲಿರುವ ಪ್ರಾಥಮಿಕ ಶಾಲೆಗಳ ಮೇಲ್ವಿಚಾರಣೆ ಮಾಡುವರು.

**ಸಬ್‌ರಜಿಸ್ಟ್ರಾರ**— ಜನರು ತಾವು ಮಾಡಿದ ವ್ಯವಹಾರಗಳ ದಾಖಲೆಗಳು ಸರಕಾರದಲ್ಲಿ ಉಳಿಯಬೇಕೆಂದು ಅವುಗಳನ್ನು ಸರಕಾರ ದಲ್ಲಿ ನೋಂದು ಮಾಡಿಸುವರು. ಇಂಥ ಕಾಗದಗಳನ್ನು ನೋಂದು ಮಾಡಿಕೊಳ್ಳುವ ಸಲುವಾಗಿ ಈ ಅಧಿಕಾರಿಯು ಇರುವನು.

**ಸಬ್‌ಪೋಸ್ಟ ಮಾಸ್ತರ**—ಹಳ್ಳಿಗಳಲ್ಲಿ ಅಂಚೆಯನ್ನು ಮುಟ್ಟಿ ಸುವದಕ್ಕೆ ಪೋಸ್ಟಮನ್ನರು, ಮತ್ತು ಕೆಲವು ಊರುಗಳಲ್ಲಿ ಬ್ರ್ಯಾಂಚ ಪೋಸ್ಟ ಮಾಸ್ತರರು ಇರುವರು. ಈ ಕೆಲಸದ ಮೇಲ್ವಿಚಾರಣೆಯನ್ನು ಸಬ್‌ಪೋಸ್ಟಮಾಸ್ತರರು ಮಾಡುವರು.

ಇವರೆಲ್ಲರು ತಾಲೂಕಿನ ಅಧಿಕಾರಿಗಳು. ಇವರು ತಾಲೂಕಿನ ಸ್ಥಳದಲ್ಲಿ ಇಲ್ಲವೆ ಗೊತ್ತುಪಡಿಸಿದ ಊರಲ್ಲಿ ಇದ್ದುಕೊಂಡು ತಮಗೆ ಒಪ್ಪಿಸಿದ ಕೆಲಸಗಳನ್ನು ಮಾಡುವರು.

## ಜಿಲ್ಲೆಯ ಅಧಿಕಾರಿಗಳು.

**ಡೆಪುಟಿ ಕಮಿಶನರ**— ಇವನು ಜಿಲ್ಲೆಯ ಮುಖ್ಯ ಅಧಿ ಕಾರಿಯು. ತನ್ನ ಜಿಲ್ಲೆಯಲ್ಲಿಯ ತಹಸಿಲದಾರರ ಕೆಲಸಗಳ ಮೇಲ್ವಿ ಚಾರಣೆ ಮಾಡುವನು. ಜಿಲ್ಲೆಯಲ್ಲಿಯ ಹೊಲದ ತೆರಿಗೆಯನ್ನು ವಸೂಲ ಮಾಡುವನು. ಬೆಳೆಗೇಡಾಗಿದ್ದರೆ ತೆರಿಗೆಯ ಹಣವನ್ನು ತಡೆ ಹಿಡಿಯು ವಂತೆ ಇಲ್ಲವೆ ಕಡಮೆ ಮಾಡುವಂತೆ ಸರಕಾರಕ್ಕೆ ಶಿಫಾರಸು ಮಾಡು ವನು. ಜಿಲ್ಲೆಯಲ್ಲಿ ಶಾಂತತೆ ಕಾಯ್ದುಕೊಳ್ಳುವ ಜವಾಬುದಾರಿಯು ಇವನ ಮೇಲೆ ಇರುತ್ತದೆ.

**ಪೋಲೀಸ ಸುಪರಿಂಟೆಂಡೆಂಟ**— ಶಾಂತತೆಯನ್ನು ಕಾಯ್ದು ಕೊಳ್ಳಲು ತಾಲೂಕುಗಳಲ್ಲಿ ಫೌಜದಾರರು ಇರುವರಷ್ಟೆ. ಅವರು ಮಾಡಿದ ಕೆಲಸಗಳ ಮೇಲ್ವಿಚಾರಣೆ ಮಾಡುವದಕ್ಕೆ ಜಿಲ್ಲೆಯ ಸ್ಥಳದಲ್ಲಿ ಈ ಅಧಿಕಾರಿಯು ಇರುವನು. ಇವನ ಸಹಾಯಕ್ಕೆ ಡೆಪುಟಿ ಸುಪ ರಿಂಟೆಂಡೆಂಟರೂ ಸರ್ಕಲ್ ಪೋಲೀಸ ಇನ್‌ಸ್ಪೆಕ್ಟರರೂ ಇರುವರು.

**ಡಿಸ್ಟ್ರಿಕ್ಟ ಜಜ್ಜ—** ತಾಲೂಕಿನಲ್ಲಿರುವ ಸಬ್ ಜಜ್ಜ ಕೋರ್ಟು ಗಳ ನಿರ್ಣಯದ ಪುನರ್ವಿಚಾರಣೆ ಮಾಡಿ ನಿರ್ಣಯ ಕೊಡುವದು ಇವನ ಕೆಲಸ. ಕಳವು, ದರೋಡೆ, ಕೊಲೆ, ಸುಲಿಗೆ ಇವುಗಳನ್ನು ಮಾಡಿದ ಆರೋಪಿಗಳ ವಿಚಾರಣೆಯು ತಾಲೂಕಿನ ಸ್ಥಳದಲ್ಲಿ ಆಗುತ್ತದೆ. ಆದರೆ ಹೆಚ್ಚಿನ ಶಿಕ್ಷೆಗೆ ಪಾತ್ರರಿರುವ ಆರೋಪಿಗಳ ವಿಚಾರಣೆಯು ಯೋಗ್ಯ ರೀತಿಯಲ್ಲಿ ನಡೆಯಬೇಕೆಂದು ತಾಲೂಕಿನಲ್ಲಿಯ ಕೋರ್ಟುಗಳು ಅವುಗಳನ್ನು ಡಿಸ್ಟ್ರಿಕ್ಟ ಜಜ್ಜನ ಕಡೆಗೆ ಕಳಿಸುವವು. ಗಲ್ಲಿನ ಶಿಕ್ಷೆಯ ವರೆಗೆ ಎಲ್ಲ ಬಗೆಯ ಶಿಕ್ಷೆಗಳನ್ನು ಕೊಡುವ ಅಧಿಕಾರವು ಇವನಿಗಿರುವದು.

**ಶಿಕ್ಷಣ ಖಾತೆ—** ಜಿಲ್ಲೆಯಲ್ಲಿಯ ಮಕ್ಕಳಿಗೆ ಶಿಕ್ಷಣ ಕೊಡುವ ಕಾರ್ಯವು ಜಿಲ್ಲಾ ಸ್ಕೂಲ ಬೋರ್ಡಿನದು. ಈ ಜಿಲ್ಲಾ ಸ್ಕೂಲಬೋರ್ಡಿನಲ್ಲಿ ಹದಿನಾರು ಜನ ಸದಸ್ಯರು ಇರುವರು. ಸ್ಕೂಲಬೋರ್ಡಿನ ಆಡಳಿತೆ ನಡಿಸುವದಕ್ಕಾಗಿ ಆಡ್‌ಮಿನಿಸ್ಟ್ರೇಟಿವ್ಹ ಆಫೀಸರ ಎಂಬ ಸರಕಾರದ ಅಧಿಕಾರಿಯು ಇರುವನು.

ಜಿಲ್ಲೆಯೊಳಗಿನ ಪ್ರಾಥಮಿಕ ಮಾಧ್ಯಮಿಕ ಶಾಲೆಗಳ ಮೇಲ್ವಿಚಾರಣೆ ಮಾಡುವದಕ್ಕಾಗಿ ಜಿಲ್ಲೆಯ ಸ್ಥಳದಲ್ಲಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಎಂಬ ಅಧಿಕಾರಿಯು ಇರುವನು. ಇವನ ಸಹಾಯಕ್ಕೆ ಡೆಪುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರನು ಮತ್ತು ಅಸಿಸ್ಟಂಟ ಡೆಪುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರು ಇರುತ್ತಾರೆ.

ಈ ಅಧಿಕಾರಿಗಳು ತಮ್ಮ ತಮ್ಮ ಕೆಲಸವನ್ನು ಯೋಗ್ಯ ರೀತಿಯಲ್ಲಿ ಮಾಡಿ ಜನರ ಹಿತವನ್ನು ನೋಡಿಕೊಳ್ಳುವರು. ಇವರು ಮಾಡುವ ಕೆಲಸಗಳು ನಮ್ಮ ಹಿತಕ್ಕಾಗಿಯೇ ಇರುವದರಿಂದ ಇವರ ಕಾರ್ಯದಲ್ಲಿ ಯೋಗ್ಯ ರೀತಿಯಿಂದ ಸಹಕರಿಸುವದು ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ.

## ಅಭ್ಯಾಸ

1 ತಾಲೂಕಿನ ಮುಖ್ಯ ಅಧಿಕಾರಿಯು ಯಾರು ?

2 ಫೌಜದಾರನ ಕೆಲಸವೇನು ? ಅವನ ಸಹಾಯಕ್ಕೆ ಯಾರು ಯಾರು ಇರುವರು ?

3 ಬಿಟ್ಟ ಸ್ಥಳ ತುಂಬಿ ಪೂರ್ಣ ಮಾಡಿರಿ.

ಕಳವು ಬಡಿದಾಟಗಳನ್ನು ಮಾಡಿದ ಜನರ ಮೇಲೆ ಖಟ್ಲೆ ಹಾಕುವದನ್ನು ..........................ನು ಮಾಡುವನು. ಕೊಡಕೊಳ್ಳುವ ವ್ಯವಹಾರದಲ್ಲಿ ಬಂದ ನ್ಯಾಯಗಳ ವಿಚಾರಣೆಯನ್ನು ..............................ನು ಮಾಡುವನು.

4 ಕೆಳಗಿನ ಸಂಗತಿಗಳನ್ನು ಸರಿಪಡಿಸಿ ಬರೆಯಿರಿ.

(i) ಗಲ್ಲಿನ ಶಿಕ್ಷೆಯನ್ನು ಕೊಡುವ ಅಧಿಕಾರವು ತಹಸಿಲದಾರನಿಗೆ ಇರುವದು.

(ii) ಫೌಜದಾರರ ಕಚೇರಿಗಳಲ್ಲಿ ಜನರು ವ್ಯವಹಾರಗಳ ನೋಂದಣಿ ಮಾಡುತ್ತಾರೆ.

(iii) ಎಜ್ಯುಕೇಶನಲ್ ಇನ್‌ಸ್ಪೆಕ್ಟರನು ಸ್ಕೂಲಬೋರ್ಡಿನ ಆಡಳಿತೆ ಸಾಗಿಸುವನು.

# 9 ಸಂಘ ಸಂಸ್ಥೆಗಳು

ನಮ್ಮ ಜೀವನವನ್ನು ನಡಿಸಲಿಕ್ಕೆ ನಾವು ಎರಡನೆಯವರಿಂದ ಅನೇಕ ರೀತಿಯಲ್ಲಿ ಸಹಾಯ ಪಡೆಯುತ್ತೇವೆ. ಅದೇ ರೀತಿಯಲ್ಲಿ ನಾವಾದರೂ ಎರಡನೆಯವರಿಗೆ ನೆರವಾಗುತ್ತೇವೆ.

ಒಬ್ಬನಿಗೆ ತನ್ನ ಹೊಲಗಳನ್ನು ಉತ್ತುಬಿತ್ತಲಿಕ್ಕೆ ಬೇಕಾದ ಒಂದು ಜೋಡಿ ಎತ್ತು ಕೊಳ್ಳಲಿಕ್ಕೆ ಸಾಧ್ಯವಿಲ್ಲವೆಂದು ತಿಳಿಯಿರಿ. ಆಗ ಅವನು ಒಂದು ಎತ್ತನ್ನು ಮಾತ್ರ ತೆಗೆದುಕೊಳ್ಳುತ್ತಾನೆ. ತನ್ನಂತೆಯೇ ಒಂದು ಎತ್ತನ್ನು ಇಟ್ಟುಕೊಂಡವನ ಜೊತೆಗೆ ಮುಯ್ಯ ಕೂಡುತ್ತಾನೆ.

ಈ ಜೊತೆ ಎತ್ತುಗಳಿಂದ ಅವರಿಬ್ಬರು ತಮ್ಮ ತಮ್ಮ ಹೊಲಗಳನ್ನು ಉತ್ತು ಬಿತ್ತಿ ಬೆಳೆ ತೆಗೆದುಕೊಳ್ಳುತ್ತಾರೆ. ಇವಕ್ಕೆಯೇ ಸಹಕಾರ ಜೀವನ ಎಂಬು ಹೇಳುವರು. ನಮ್ಮ ಹಳ್ಳಿಗಳಲ್ಲಿ ಸಣ್ಣಪ್ರಮಾಣ ದಲ್ಲಿ ಈ ಸಹಕಾರೀ ಜೀವನವು ಎಲ್ಲ ಕಡೆಗೂ ನೋಡಲಿಕ್ಕೆ ದೊರೆಯು ತ್ತದೆ. ಇದೇ ಬಗೆಯಾಗಿ ಹಲವರು ಕೂಡಿದರೆ ಅದು ಒಂದು ಸಂಘ ವೆನಿಸುತ್ತದೆ, ಸಂಸ್ಥೆ ಎನಿಸುತ್ತದೆ. ಇಂತಹ ಹಲವು ಸಂಘ ಸಂಸ್ಥೆಗಳು ನಮ್ಮಲ್ಲಿ ಇರುತ್ತವೆ.

ಹಳ್ಳಿಯ ಒಕ್ಕಲಿಗರಲ್ಲಿ ಬೇಕಾದಾಗ ಕೈಯಲ್ಲಿ ಹಣವಿರುವದಿಲ್ಲ. ಹಣದ ಅವಶ್ಯಕತೆ ಬಿದ್ದಾಗ ಅವರು ಸಾಲ ತೆಗೆಯಬೇಕಾಗುತ್ತದೆ. ಸಾಲ ಕೊಡುವವರಿಗೆ ತೆಗೆದುಕೊಂಡವನು ತಿರುಗಿ ಅದನ್ನು ಮುಟ್ಟಿ ಸುವನೆಂದು ವಿಶ್ವಾಸವಿರಬೇಕಾಗುತ್ತದೆ. ಹೀಗೆ ವಿಶ್ವಾಸವಿರದಿದ್ದರೆ ಸಾಲ ದೊರೆಯುವದಿಲ್ಲ. ಆದ್ದರಿಂದ ಹಳ್ಳಿಯಲ್ಲಿ ಒಕ್ಕಲುತನ ಮಾಡು ವವರು ತಮ್ಮದೊಂದು ಸಂಘವನ್ನು ಮಾಡಿಕೊಂಡು ಪತ್ತು ಬೆಳಿಸಿ ಕೊಳ್ಳುತ್ತಾರೆ. ಆ ಸಂಘದ ಮುಖಾಂತರವಾಗಿ ಹಣವನ್ನು ಪಡೆಯು ತ್ತಾರೆ. ಇಂತಹ ಸಂಘಗಳಿಗೆ 'ಒಕ್ಕಲುತನದ ಪತ್ತು ಬೆಳಿಸುವ ಸಹ ಕಾರೀ ಸಂಘಗಳು' ಎಂದು ಹೆಸರು. ಇಂತಹ ಸಂಘಗಳು ಬೆಳಗಾವಿ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಎಲ್ಲ ಊರುಗಳಲ್ಲಿ ಇರುತ್ತವೆ. ಈ ಸಂಘ ಗಳಿಗೆ ಅವಶ್ಯವಿದ್ದ ಸಾಲವನ್ನು ಕೊಡುವದಕ್ಕೂ ತಿರುಗಿ ಪಡೆಯುವ ದಕ್ಕೂ ಜಿಲ್ಲೆಯ ಸ್ಥಳದಲ್ಲಿ 'ಜಿಲ್ಲಾ ಮಧ್ಯವರ್ತಿ ಸಹಕಾರೀ ಬ್ಯಾಂಕು' ಎಂಬದು ಇರುತ್ತದೆ.

ಒಕ್ಕಲುತನಕ್ಕೆ ಬೀಜ, ಗೊಬ್ಬರಗಳೂ ಉಪಕರಣ ತಯಾರಿಸಿ ಕೊಳ್ಳುವದಕ್ಕೆ ಕಬ್ಬಿಣ ಮೊದಲಾದವುಗಳೂ ಬೇಕಾಗುತ್ತವೆ. ಒಬ್ಬೊ ಬ್ಬನೇ ತನಗೆ ಬೇಕಾದ ಒಳ್ಳೆಯ ಬೀಜ ಗೊಬ್ಬರಗಳನ್ನು ತರಿಸಿ ಕೊಳ್ಳಲು ಆಸ್ಪದವಿರುವದಿಲ್ಲ. ಅವು ಒಳ್ಳೆಯವು ದೊರೆಯುವದಿಲ್ಲ.

ಆದುದರಿಂದ ಒಕ್ಕಲುತನ ಮಾಡುವವರು ತಮ್ಮದೊಂದು ಸಂಘವನ್ನು ಮಾಡಿಕೊಂಡರೆ ಆ ಸಂಘದ ಮುಖಾಂತರ ಉತ್ತಮವಾದ ಬೀಜ ಗೊಬ್ಬರಗಳನ್ನೂ ಕಬ್ಬಿಣ ಮೊದಲಾದವನ್ನೂ ಪಡೆಯಲು ಅನುಕೂಲ ವಾಗುವದು. ಸರಕಾರದವರು ಇಂತಹ ಸಂಘಗಳಿಗೆ ಉತ್ತೇಜನ ಕೊಡುತ್ತಿದ್ದಾರೆ. ಈ ಉದ್ದೇಶದಿಂದ ಸ್ಥಾಪಿತವಾದ ಸಂಘಗಳಿಗೆ 'ವಿವಿಧೋದ್ದೇಶ ಸಂಘಗಳು' ಎಂದು ಹೆಸರು. ಇಂತಹ ವಿವಿಧೋದ್ದೇಶ ಸಂಘಗಳೂ ಕೆಲವು ಕಡೆಗೆ ಇರುತ್ತವೆ. ಇವುಗಳಿಗಾದರೂ ಜಿಲ್ಲಾ ಮಧ್ಯವರ್ತಿ ಬ್ಯಾಂಕು ಅವಶ್ಯವಿದ್ದ ಹಣವನ್ನು ಪೂರಯಿಸಿ ತಿರುಗಿ ಪಡೆಯುತ್ತದೆ.

ಇದೇ ಬಗೆಯಾಗಿ ಸಂಘಗಳನ್ನು ಸ್ಥಾಪಿಸಿಕೊಂಡು ಹಲವು ಅವಶ್ಯಕತೆಗಳನ್ನು ಪೂರಯಿಸಿಕೊಳ್ಳಲು ಬರುತ್ತದೆ. ಬಡಬಗ್ಗರಿಗೆ ಮನೆ ಕಟ್ಟಿಕೊಳ್ಳುವದೆಂದರೆ ಶಕ್ಯವಿರುವದಿಲ್ಲ. ಅಂಥವರು ತಮ್ಮ ದೊಂದು ಸಂಘವನ್ನು ಮಾಡಿಕೊಂಡು ತಮಗೆ ಅವಶ್ಯವಿದ್ದ ಸ್ಥಳವನ್ನು ಸರಕಾರದಿಂದ ಪಡೆದು ಸಂಘದ ಮುಖಾಂತರ ಸಾಲ ಪಡೆದು ಮನೆ ಕಟ್ಟಿಕೊಳ್ಳಬಹುದು. ಈ ಬಗೆಯಲ್ಲಿ ಮನೆ ಕಟ್ಟಿಕೊಳ್ಳುವ ಸಂಘಗಳು ಬೆಳಗಾವಿ ಜಿಲ್ಲೆಯಲ್ಲಿ ೨೩ ಕಡೆಗೆ ಇರುತ್ತವೆ. ಹಲವರು ಕೂಡಿ ಕೊಂಡು ತಮಗೆ ಅಗತ್ಯವಿರುವ ದಿನ ಬಳಕೆಯ ಸಾಹಿತ್ಯಗಳನ್ನು ಪಡೆಯುವ ಗಿರಾಕಿಗಳ ಸಂಘಗಳನ್ನೂ ಸ್ಥಾಪಿಸಿಕೊಂಡಿದ್ದಾರೆ. ಇಂತಹ ಗಿರಾಕಿಗಳ ಸಂಘಗಳೂ ಈ ಜಿಲ್ಲೆಯಲ್ಲಿ ೨೩ ಇರುತ್ತವೆ. ಪ್ರತಿಯೊಂದು ವೃತ್ತಿಯವರೂ ಇಂತಹ ಸಹಕಾರೀ ಸಂಘ ಗಳನ್ನು ಸ್ಥಾಪಿಸಿಕೊಳ್ಳುವದು ಶಕ್ಯವಿದೆ. ಹಾಲು ಮಾರುವವರು ತಮ್ಮ ಸಂಘವನ್ನು ಸ್ಥಾಪಿಸಿಕೊಂಡು ಹಾಲು ಮಾರಬಹುದು. ತೋಟಗಾರರು ತಮ್ಮ ಸಂಘವನ್ನು ಸ್ಥಾಪಿಸಿಕೊಂಡು ತೋಟದ ಬೆಳೆಯನ್ನು ಮಾರ ಬಹುದು. ಹಾಗು ಬೆಳೆಮಾಡುವದಕ್ಕೆ ಸಾಲ ಪಡೆಯಬಹುದು.

ಸಂಕೇಶ್ವರದ ಸುತ್ತಮುತ್ತಲಿನ ರೈತರು ಮತ್ತು ಭೂಮಿಯ ಒಡೆಯರು ಸಹಕಾರ ತತ್ವದ ಮೇಲೆ ಸಕ್ಕರೆಯ ಕಾರಖಾನೆ ಸ್ಥಾಪಿಸುವದಕ್ಕೆ ತೊಡಗಿದ್ದಾರೆ. ಘಟಪ್ರಭೆಯಲ್ಲಿ ಸಹಕಾರೀ ದವಾಖಾನೆಯು ಸ್ಥಾಪಿತವಾಗಿದೆ. ಸರಕಾರದವರು ಇಂತಹ ಸಹಕಾರೀ ಸಂಘಗಳನ್ನು ಸ್ಥಾಪಿಸಿಕೊಳ್ಳಲು ಉತ್ತೇಜನ ಕೊಡುತ್ತಿದ್ದಾರೆ. ಸ್ಥಾಪಿತವಾಗುವ ಸಂಘಗಳಿಗೆ ಆವಶ್ಯವಿದ್ದ ಸಹಾಯಗಳನ್ನು ಒದಗಿಸುತ್ತಿದ್ದಾರೆ. ಈ ಸಹಕಾರೀ ಸಂಘಗಳಮೇಲ್ವಿಚಾರಣೆಗಾಗಿ ಜಿಲ್ಲೆಯ ಸ್ಥಳವಾದ ಬೆಳಗಾವಿಯಲ್ಲಿ ಅಸಿಸ್ಟಂಟ ರಜಿಸ್ಟ್ರಾರ ಎಂಬ ಅಧಿಕಾರಿಯು ಇರುವನು.

## ಅಭ್ಯಾಸ

1 ಒಕ್ಕಲುತನದ ಪತ್ತು ಬೆಳಿಸುವ ಸಹಕಾರೀ ಸಂಘಗಳಿಂದ ಉಪಯೋಗ ವೇನು ?

2 ವಿವಿಧೋದ್ದೇಶ ಸಂಘಗಳು ತಮಗೆ ಬೇಕಾದ ಹಣವನ್ನು ಎಲ್ಲಿಂದ ಪಡೆಯುತ್ತವೆ ?

3 ಸಹಕಾರೀ ಸಂಘಗಳ ಮೇಲ್ವಿಚಾರಣೆಯು ಯಾರಿಂದ ನಡೆಯುತ್ತದೆ ?



# 10 ನಕಾಶವಾಚನ

ನಕಾಶದಲ್ಲಿ ಬೇರೆ ಬೇರೆ ತರದ ಗುರುತುಗಳು ಇರುತ್ತವೆ. ಆ ಗುರುತುಗಳ ಸಹಾಯದಿಂದ ನಕಾಶವನ್ನು ಓದಿ ತಿಳಿದುಕೊಳ್ಳಲು ಬರುತ್ತದೆ. ನಕಾಶದಲ್ಲಿ ಬರುವ ಗುರುತುಗಳ ಅರ್ಥವನ್ನು ಕೆಳಗೆ ಕೊಟ್ಟಿರುತ್ತದೆ. ಜಿಲ್ಲೆಯ ನಕಾಶವನ್ನು ನೋಡಿ ಯಾವ ಯಾವ ಊರುಗಳಲ್ಲಿ ಏನೇನು ಇರುತ್ತದೆ ಹೇಳಿರಿ.

| | | | |
|---|---|---|---|
| | ಶೀಮೆ | | ತಾರ ಆಫೀಸ |
| | ಲೈನ ದಾರಿ | | ಕೈಗಾರಿಕೆಯ ಸ್ಥಳ |
| | ಉಗಿಬಂಡಿಯ ದಾರಿ | | ಹಳ್ಳಿ |
| | ನದಿ | | ದೊಡ್ಡ ಊರು |
| | ದಿನ್ನೆ | | ಸಂತೆ ನೆರೆಯುವ ಊರು |
| | ಗುಡ್ಡ, ಪರ್ವತ | | ರೇಲ್ವೆ ಸ್ಟೇಶನ್ |
| | ಬನ, ಹಳುವು | | ಪ್ರವಾಸಿಕರ ಬಂಗಲೆ |
| | ಹೊಲಗಳು | | ಉಸುಕಿನ ಬೈಲು |
| | ಬಾವಿ | | ಕೋಟೆ |
| | ಮನೆ | | ಪೂಲು |
| | ಚಾವಡಿ | | ಕಲ್ಲಿನ ಕಣಿ |
| | ದೇವಸ್ಥಾನ | | ಹಣ್ಣಿನ ತೋಟ |
| | ಚರ್ಚ್ | | ಬಂದರ |
| | ದವಾಖಾನೆ | | ದೀಪಸ್ತಂಭ |
| | ಪೇಟೆ | | ಮೀನ ಹಿಡಿಯುವ ಸ್ಥಳ |
| | ಗಿರಣಿ | | ಉಪ್ಪಿನ ಮಾಳ |
| ಅಥವಾ P | ಪೋಸ್ಟ ಆಫೀಸ | | ಉತ್ತರದಿಕ್ಸೂಚಿ |

